ಪರಮದಯಾಮಯ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಸೈದ್ಧಾಂತಿಕ ಆಧಾರದಲ್ಲಿರುವ ತತ್ತ್ವೋಪದೇಶಗಳು ಸಾಮಾನ್ಯವಾಗಿ ಹೆಚ್ಚಿನವರಿಗೆ ರುಚಿಸುವುದಿಲ್ಲ. ಆದರೆ ಅದೇ ತತ್ತ್ವೋಪದೇಶಗಳು ಕಥೆಯ ರೂಪದಲ್ಲಿದ್ದರೆ ಅದು ಹೃದಯದಲ್ಲಿ ಸುಪ್ತವಾಗಿರುವ ಉತ್ತಮ ಭಾವನೆಗಳನ್ನು ಬಡಿದೆಬ್ಬಿಸುತ್ತವೆ.

ನಾನಾ ರೂಪದ ಕಥೆಗಳಿವೆ. ಘಟನೆಗಳ ವಿವರಣೆಗಳು ನೈಜ ಕಥೆಗಳಾಗುತ್ತವೆ. ಕುರ್‌ಆನ್ ಮತ್ತು ಹದೀಸ್ ಗ್ರಂಥಗಳಲ್ಲಿ ಹಲವು ಪಾಠಬೋಧಕ ಘಟನೆಗಳನ್ನು ವಿವರಿಸಲಾಗಿದೆ. ಕಥೆಯ ರೂಪ ತಾಳುವ ಈ ನೈಜ ಘಟನೆಗಳ ವಿವರಣೆಗಳು ವಾಚಕರ ಮನ ಸೆಳೆಯುತ್ತವೆ. ಕುರ್‌ಆನ್ ಮತ್ತು ಹದೀಸ್ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿರುವ ಕಥೆಗಳು ಪ್ರಾಮಾಣಿಕವೆಂಬ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ವಚನಗಳಲ್ಲಿ ಉದ್ಧರಿಸಲಾಗಿರುವ ಚರಿತ್ರೆಗಳು ವಾಚಕರ ಮನೋರಂಜನೆಯ ಉದ್ದೇಶವನ್ನು ಹೊಂದಿಲ್ಲ ಅಥವಾ ಅವು ಕೇವಲ ಘಟನೆಗಳ ಉದ್ಧರಣೆಯಲ್ಲ. ಬದಲಾಗಿ ಮಾನವನ ಜೀವನಕ್ಕೆ ಬೇಕಾದ ನೀತಿಪಾಠಗಳನ್ನು ಅವುಗಳಿಂದ ಕಲಿಯಬಹುದಾಗಿದೆ. ಅಂತೆಯೇ ಅದರಿಂದ ತಪ್ಪು ತಿಳಿಯಲಾದ ಚಾರಿತ್ರಿಕ ಘಟನೆಗಳ ವಾಸ್ತವಿಕತೆಯನ್ನು ಗ್ರಹಿಸಬಹುದು. ಆದ್ದರಿಂದ ಈ ಕಥೆಗಳು ಕೆಲವರಿಗೆ ನೀರಸವೆನಿಸಬಹುದಾದರೂ ಸನ್ಮಾರ್ಗವನ್ನು ಹುಡುಕುವವರಿಗೆ ಇವು ಅಮೂಲ್ಯ ರತ್ನಗಳೆನಿಸುವುದರಲ್ಲಿ ಸಂದೇಹವಿಲ್ಲ.

ಅಬೂ ರಶೀದ್‌ರು ಮಲಯಾಳಂನಲ್ಲಿ ಎರಡು ಭಾಗಗಳಲ್ಲಿ ಕ್ರೋಢೀಕರಿಸಿದ "ಹದೀಸ್ ಶರೀಫಿಲೇ ಕಥೆಗಳ್" ಎಂಬ ಕೃತಿಯನ್ನು ಕನ್ನಡ ವಾಚಕರಿಗಾಗಿ ಇಲ್ಲಿ ಅನುವಾದಿಸಲಾಗಿದೆ. ಅಧಿಕೃತ ಹದೀಸ್ ಗ್ರಂಥಗಳಿಂದ ಆಯ್ದ ಘಟನೆಗಳನ್ನು ಕಥಾ ರೂಪದಲ್ಲಿ ಇಲ್ಲಿ ನಿರೂಪಿಸ ಲಾಗಿದೆ. ಕಥೆಗಳನ್ನು ಸಾಧ್ಯವಿರುವಷ್ಟರ ಮಟ್ಟಿಗೆ ಹದೀಸ್‌ನ ಮೂಲ ವಾಕ್ಯಗಳಲ್ಲಿಯೇ ಹೊಂದಿಸಲು ಪ್ರಯತ್ನಿಸಲಾಗಿದೆ. ಹೆಚ್ಚಿನ ವಿವರಣೆಗಳನ್ನು ಹದೀಸ್‌ನ ಮೂಲವಾಕ್ಯಗಳ ಆಧಾರದಲ್ಲಿಯೇ ನೀಡಲಾಗಿದೆ. ಕಥೆಯಲ್ಲಿ ಅಡಕವಾಗಿರುವ ನೀತಿಯನ್ನು ತಿಳಿಯಬೇಕೆಂಬ ಉದ್ದೇಶದಿಂದ ಪ್ರತಿಯೊಂದು ಕಥೆಯ ಅಂತ್ಯದಲ್ಲಿ ಗಮನಾರ್ಹ ಟಿಪ್ಪಣಿಗಳನ್ನೂ ಸೇರಿಸಲಾಗಿದೆ.

ಶಾಲಾವಿದ್ಯಾರ್ಥಿಗಳಿಗೆ ಇಸ್ಲಾಮೀ ಚರಿತ್ರೆಯನ್ನು ಸರಳ ಭಾಷೆಯಲ್ಲಿ ತಿಳಿಸುವ ಈ ಕೃತಿಯು ಹಿರಿಯರಿಗೂ ಉಪಯುಕ್ತವಾಗಿದೆ. ಇಂದು ಅಪರೂಪವಾಗುತ್ತಿರುವ ನೈತಿಕ ಮೌಲ್ಯಗಳನ್ನು ಜಾಗೃತಗೊಳಿಸುವ ನಿಟ್ಟಿನಲ್ಲಿ ಈ ಕೃತಿಯು ಸಹಾಯಕವಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಹುದೈಬಿಯಾ ಒಪ್ಪಂದ

ಹಿಜರಿ 6ನೆಯ ವರ್ಷದ 'ದುಲ್‌ಕಅದ್' ತಿಂಗಳ ಅದೊಂದು ಸೋಮವಾರ, ಪ್ರವಾದಿ(ಸ) ಮತ್ತು ಅವರ ಅನುಯಾಯಿಗಳು ಪವಿತ್ರ 'ಉಮ್ರಾ' ನಿರ್ವಹಣೆಗಾಗಿ ಮಕ್ಕಾಕ್ಕೆ ಹೊರಟರು. ಅದಕ್ಕೆ ಬೇಕಾದ ಬಲಿಪ್ರಾಣಿಗಳನ್ನೂ ತಮ್ಮೊಂದಿಗೆ ಒಯ್ದಿದ್ದರು. ಈ ಪ್ರಯಾಣದಲ್ಲಿ ಪ್ರವಾದಿಯವರ(ಸ) ಜತೆ 1520 ಮಂದಿ ಸಹಾಬಿಗಳಿದ್ದರೆಂದು ಪ್ರಬಲ ಹದೀಸ್‌ಗಳಲ್ಲಿ ಉಲ್ಲೇಖಿಸಲಾಗಿದೆ. ಅವರ ಬಳಿ ಆತ್ಮರಕ್ಷಣೆಗಾಗಿ ಕೇವಲ ಒಂದೊಂದು ಖಡ್ಗವಿತ್ತು.

ಈ ಯಾತ್ರಾ ತಂಡವು 'ದುಲ್ ಹುಲೈಫಾ' ಎಂಬಲ್ಲಿಗೆ ತಲಪಿದಾಗ ಮಕ್ಕಾ ನಿವಾಸಿಗಳಿಗೆ ಸುದ್ದಿ ಮುಟ್ಟಿತು. 'ಏನೇ ಬರಲಿ, ನಾವು ಮುಹಮ್ಮದ್ ಮತ್ತು ಆತನ ಅನುಯಾಯಿಗಳನ್ನು ಮಕ್ಕಾಕ್ಕೆ ಪ್ರವೇಶಿಸಲು ಬಿಡಲಾರೆವು.' ಅವರು ದೃಢ ನಿರ್ಧಾರ ಮಾಡಿದರು. ಅದಕ್ಕಾಗಿ ಮಕ್ಕಾದ ಪರಿಸರ ಪ್ರದೇಶಗಳ ಇತರ ಗೋತ್ರಗಳ ನೆರವಿನಿಂದ ಒಂದು ಬೃಹತ್ ಸೇನೆಯನ್ನು ಪ್ರವಾದಿಯವರ(ಸ) ವಿರುದ್ಧ ಸಜ್ಜುಗೊಳಿಸಿದರು. ಮಕ್ಕಾದ ಹೊರಗಿನ 'ಬಲ್ದ' ಎಂಬ ಸ್ಥಳದಲ್ಲಿ ಅವರು ಬಿಡಾರ ಹೂಡಿದರು.

ಪ್ರವಾದಿಯವರ್ವರಿಗೆ(ಸ) ಈ ಸುದ್ದಿ ಮುಟ್ಟಿತು. ಅವರು ಸಹಾಬಿಗಳೊಡನೆ ಸಮಾಲೋಚನೆ ನಡೆಸಿ ಮಕ್ಕಾದ ಸಾಮಾನ್ಯ ಹಾದಿಯನ್ನು ಬಿಟ್ಟು ಬೇರೊಂದು ಹಾದಿಯಲ್ಲಿ ಸಾಗಿದರು. ಪ್ರಸ್ತುತ ದುರ್ಗಮ ಹಾದಿಯಲ್ಲಿ ಸಾಗಿ ಅವರು ಅನಿರೀಕ್ಷಿತವಾಗಿ ವೈರಿಗಳ ಮೇಲೆರಗಿದರು. ಈ ಅನಿರೀಕ್ಷಿತ ದಾಳಿಯನ್ನು ಎದುರಿಸಲಾಗದೆ ವೈರಿಗಳು ಪಲಾಯನ ಮಾಡಬೇಕಾಯಿತು. ಪ್ರವಾದಿ(ಸ) ಮತ್ತು ಸಂಗಡಿಗರು ಅವರನ್ನು ಬೆನ್ನಟ್ಟಿದರು. ಅವರು 'ಹುದೈಬಿಯಾ' ಎಂಬ ಪ್ರದೇಶವನ್ನು ದಾಟಿ 'ಸನಿಯತುಲ್ ಮುರಾದ್' ಎಂಬಲ್ಲಿಗೆ ತಲಪಿದರು. ಆಗ ಪ್ರವಾದಿಯವರ(ಸ) ಅತಿವೇಗದ 'ಕಸ್ವಾ' ಎಂಬ ಒಂಟೆ ಥಟ್ಟನೆ ಮೊಣಕಾಲೂರಿತು. ಅದನ್ನು ಎಬ್ಬಿಸಲು ಜನರು ಬಹಳಷ್ಟು ಪ್ರಯತ್ನಿಸಿದರು. ಆದರೆ ಅದು ಏಳಲಿಲ್ಲ. ಅವರು ಅಲ್ಲಿಂದ ಮುಂದೆ ಹೋದರೆ ಪವಿತ್ರ ಕಅಬಾದ ಪಾವಿತ್ರ್ಯಕ್ಕೆ ಹಾನಿಯಾದೀತು, ಅದು ಅಲ್ಲಾಹನಿಗೆ ಇಷ್ಟವಿಲ್ಲವೆಂಬುದೇ ಇದರ ಸೂಚನೆಯೆಂದು ಪ್ರಸ್ತುತ ಘಟನೆಯಿಂದ ಪ್ರವಾದಿ(ಸ) ಗ್ರಹಿಸಿದರು. ಆದ್ದರಿಂದ ಪ್ರವಾದಿ(ಸ) ಮತ್ತು

ಸಂಗಾತಿಗಳು ಅಲ್ಲಿಂದ ಮರಳಿ 'ಹುದೈಬಿಯ' ಎಂಬಲ್ಲಿ ಶಿಬಿರ ಹೂಡಿದರು. ಅದೇ ದಿನ ಮುಸ್ಲಿಮರ ಬೆಂಬಲಿಗರಾಗಿದ್ದ ಮುಹಮ್ಮದ್ ಬಿನ್ ಮಸ್ಲಮರ ತಂಡವು ಮಕ್ಕಾದವರ 50 ಬೇಹುಗಾರರನ್ನು ಹಿಡಿದು ತಂದು ಪ್ರವಾದಿಯವರ(ಸ) ಮುಂದೆ ಹಾಜರುಪಡಿಸಿದರು. ಪ್ರವಾದಿಯವರು(ಸ) ಅವರನ್ನು ಬಂಧನದಲ್ಲಿರಿಸಿದರು.

ಹುದೈಬಿಯಾದಲ್ಲಿ ಒಂದು ಬಾವಿಯಿತ್ತು. ಮುಸ್ಲಿಮರು ಅದರಿಂದ ವಿಪರೀತ ನೀರು ಸೇದಿದ ಕಾರಣ ಆ ಬಾವಿ ಬತ್ತಿ ಹೋಯಿತು. ಜನರಿಗೆ ಕುಡಿಯುವ ನೀರಿಗೂ ತತ್ವಾರ ವಾಯಿತು. ಈ ಕುರಿತು ಅವರು ಪ್ರವಾದಿಯವರೊಡನೆ(ಸ) ದೂರಿದಾಗ ಪ್ರವಾದಿ ಯವರು(ಸ) ತಮ್ಮ ಬತ್ತಳಿಕೆಯಿಂದ ಒಂದು ಬಾಣವನ್ನು ಹೊರತೆಗೆದು ಅದನ್ನು ಬಾವಿಗೆ ಹಾಕುವಂತೆ ತಿಳಿಸಿದರು. ಅವರು ಹಾಗೆಯೇ ಮಾಡಿದಾಗ ಬಾವಿಯಲ್ಲಿ ಧಾರಾಳವಾಗಿ ನೀರು ಉಕ್ಕಿತು. ಅವರ ನೀರಿನ ಕೊರತೆ ನಿವಾರಣೆಯಾಯಿತು.

ಪ್ರವಾದಿಯವರು(ಸ) ಕಅಬಾದ ಪಾವಿತ್ರ್ಯವನ್ನು ಪರಿಗಣಿಸಿ ವೈರಿಗಳನ್ನು ಹಿಂಬಾಲಿಸದೆ ಮರಳಿದ ಘಟನೆಯು ಕುರೈಶರ ದುರಹಂಕಾರ ಮತ್ತು ದುರ್ಬುದ್ಧಿಯನ್ನು ಹೆಚ್ಚಿಸಿತು. ಅವರು 'ಬುದೈಲ್' ಎಂಬೋರ್ವನನ್ನು ಪ್ರವಾದಿಯವರ(ಸ) ಬಳಿಗೆ ಕಳುಹಿಸಿದರು. "ಎಲ್ಲಾ ಅರಬ್ ಗೋತ್ರಗಳೂ ನಮ್ಮ ಜತೆ ಸೇರಿವೆ; ನಿಮ್ಮನ್ನು ಕಅಬಾ ಸಂದರ್ಶನಕ್ಕೆ ಬಿಡಲಾರೆವು. ನೀವು ಬಲವಂತದಿಂದ ಪ್ರವೇಶಿಸಲು ಪ್ರಯತ್ನಿಸಿದರೆ ಯುದ್ಧ ಮಾಡಿ ನಿಮ್ಮನ್ನು ಹಿಂದಕ್ಕಟ್ಟುವ ಕುರಿತು ನಾವೆಲ್ಲರೂ ಒಮ್ಮತಾಭಿಪ್ರಾಯ ಹೊಂದಿದ್ದೇವೆ" ಎಂದು ಪ್ರವಾದಿಯವರಿಗೆ(ಸ) ತಿಳಿಸುವಂತೆ ಆತನಿಗೆ ಆದೇಶಿಸಿದರು.

ಬುದೈಲ್ ಬಂದು ಪ್ರವಾದಿಯವರಿಗೆ(ಸ) ವಿಷಯ ತಿಳಿಸಿದ. ಪ್ರವಾದಿವರ್ಯರು(ಸ) ಹೇಳಿದರು, "ನಾವು ಯುದ್ಧಕ್ಕೆ ಬಂದಿಲ್ಲ. ಉಮ್ರಾ ನಿರ್ವಹಣೆಗಾಗಿ ಬಂದಿದ್ದೇವೆ; ಕುರೈಶರು ಯುದ್ಧವನ್ನು ಬಯಸಿದಂತೆ ತೋರುತ್ತಿದೆ; ಅದು ಅವರಿಗೇ ಹಾನಿಕರವಾದೀತು; ಅವರಿಗೆ ಮನಸ್ಸಿದ್ದರೆ ಒಂದು ನಿರ್ದಿಷ್ಟ ಅವಧಿಯ ತನಕ ಯುದ್ಧ ನಿಲ್ಲಿಸೋಣ. ಈ ಅವಧಿಯಲ್ಲಿ ಒಂದು ವೇಳೆ ಅರೇಬಿಯಾದ ಇತರ ಗೋತ್ರಗಳು ನಮ್ಮನ್ನು ಸೋಲಿಸಿದರೆ ಕುರೈಶರ ಬಯಕೆ ಈಡೇರುವುದಲ್ಲವೇ; ಒಂದು ವೇಳೆ ನಾವು ಅವರನ್ನು ಸೋಲಿಸಿದರೆ ಕುರೈಶರು ನಮ್ಮನ್ನು ಅನುಸರಿಸಲಿ! ಅಥವಾ ಅವಧಿಯ ತನಕ ಯುದ್ಧವಿಲ್ಲದೆ ಮುಂದುವರಿಯ ಬಹುದು. ಅವರು ಇದರಲ್ಲಿ ಯಾವುದನ್ನೂ ಒಪ್ಪಲು ಸಿದ್ಧರಿಲ್ಲದಿದ್ದರೆ ಅಲ್ಲಾಹನಾಣೆ! ನಮ್ಮ ನರನಾಡಿಗಳಲ್ಲಿ ಪ್ರಾಣವಿರುವ ತನಕ ನಾವು ಯುದ್ಧ ಮಾಡುತ್ತೇವೆ" ಎಂದು 'ಬುದೈಲ್'ನಿಗೆ ಉತ್ತರಿಸಿದರು. ಬುದೈಲ್ ಮರಳಿ ಹೋಗಿ ಕುರೈಶರಿಗೆ ತಿಳಿಸಿದ: "ಅವರು ಕಅಬಾ ಸಂದರ್ಶನಕ್ಕಾಗಿ ಬಂದಿದ್ದಾರೆ. ಆದ್ದರಿಂದ ನಾವು ಅವರೊಡನೆ ಯುದ್ಧ ಮಾಡುವುದು ಸೂಕ್ತವಲ್ಲ. ಅವರು ಉಮ್ರಾ ಮಾಡಿ ಹೋಗಲಿ, ಅದರಿಂದ ನಮಗೆ ಯಾವ

ಹಾನಿಯೂ ಆಗಲಾರದು." ಇದನ್ನು ಕೇಳಿ ಕುರೈಶರು ಆತ ಮುಸ್ಲಿಮರ ಪಕ್ಷ ವಹಿಸಿದನೆಂದು ಭಾವಿಸಿದರು. ಆದ್ದರಿಂದ ಆತನ ಸಲಹೆಯನ್ನು ಅವರು ಸ್ವೀಕರಿಸಲಿಲ್ಲ.

ತರುವಾಯ ಅವರು 'ಉರ್ವಾ ಬಿನ್ ಮಸ್‌ವೂದ್' ಎಂಬೋರ್ವರನ್ನು ಪ್ರವಾದಿಯವರ(ಸ) ಬಳಿಗೆ ಕಳಿಸಿದರು. ಈತ ಓರ್ವ ಕುರೈಶಿ ಗಣ್ಯನಾಗಿದ್ದ. ಅವನು ಬಂದು ಪ್ರವಾದಿಯವರನ್ನು ಬಹಳವಾಗಿ ನಿಂದಿಸಿದ. ಪ್ರವಾದಿಯವರೊಂದಿಗೆ(ಸ) ಹೀನಾಯವಾಗಿ ವರ್ತಿಸಿದ. ಆದರೂ ಪ್ರವಾದಿಯವರು(ಸ) ಆತನ ಪ್ರತಿಯೊಂದು ಮಾತಿಗೂ ಸಹನೆಯಿಂದ ನಯವಾಗಿ ಉತ್ತರಿಸಿದರು. ಆದ್ದರಿಂದ ಆತ ಹಿಂತೆರಳಿ ಕುರೈಶರೊಡನೆ ಹೀಗೆ ಹೇಳಿದ: "ನಾನು ಪರ್ಶಿಯಾ, ರೋಮ್, ಅಬಿಸೀನಿಯಾ ಮುಂತಾದ ದೇಶಗಳ ಚಕ್ರವರ್ತಿಗಳ ದರ್ಬಾರಿಗೆ ಹೋಗಿದ್ದೇನೆ. ಆದರೆ ಅಲ್ಲೆಲ್ಲೂ ಮುಹಮ್ಮದನಿಗೆ ಸಮಾನವಾದಂತಹ ಪ್ರತಾಪ ಮತ್ತು ಮಹಿಮೆಯನ್ನು ನಾನು ನೋಡಿಲ್ಲ. ಅವರು ಯಾವುದಾದರೊಂದು ಆಜ್ಞೆ ನೀಡುವುದೇ ತಡ, ಜನಸಾಮಾನ್ಯರಂತಿರಲಿ, ಗಣ್ಯ ವ್ಯಕ್ತಿಗಳು ಕೂಡಾ ನಾ ಮುಂದು ತಾ ಮುಂದು ಎಂದು ಅದನ್ನು ನಿರ್ವಹಿಸಲು ಸಂತೋಷದಿಂದ ಸಿದ್ಧರಾಗುತ್ತಾರೆ. ಅವರು ಮಾತನಾಡಿದರೆ ಎಲ್ಲರೂ ಮೌನವಾಗಿ ಕುಳಿತು ಕಿವಿಗೊಟ್ಟು ಆಲಿಸುತ್ತಾರೆ. ಭಕ್ತ್ಯಾದರಗಳಿಂದ ಅವರ ಮುಖವನ್ನು ಯಾರೂ ದಿಟ್ಟಿಸಿ ನೋಡುವುದಿಲ್ಲ. ಅವರೊಡನೆ ಮಾತಾಡಲಿಕ್ಕಿದ್ದರೆ ನಯವಾಗಿ ಮೃದು ಸ್ವರದಿಂದ ಮಾತಾಡುತ್ತಾರೆ. ಅವರು ವುಝೂ ಮಾಡಿ ಉಳಿದ ನೀರನ್ನು ಪುಣ್ಯ ಜಲವೆಂದು ಭಾವಿಸಿ ಅದನ್ನು ಪಡೆಯಲು ನೂಕುನುಗ್ಗಾಟ ನಡೆಸುತ್ತಾರೆ. ಈ ವೈಶಿಷ್ಟ್ಯವಿರುವ ಜನರು ನಿಮ್ಮನ್ನು ಸೋಲಿಸದೆ ಹಿಂದೆ ಸರಿಯಲಾರರು ಅಥವಾ ಅವರೆಲ್ಲರೂ ಹತರಾಗಬೇಕಾದೀತು. ಈ ವಿಷಯ ನಿಮ್ಮ ಗಮನದಲ್ಲಿರಲಿ."

'ಉರ್ವಾ'ನ ಹೇಳಿಕೆಯಿಂದ ಕುರೈಶರಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. "ಏನಿದ್ದರೂ ಈ ವರ್ಷ ಅವರನ್ನು ಕಅಬಾಕ್ಕೆ ಬರಲು ಬಿಡುವುದಿಲ್ಲ. ಮುಂದಿನ ವರ್ಷ ಬಂದು ಉಮ್ರಾ ಮಾಡಿಹೋಗಲಿ!" ಎಂದು ಅವರು ಆತನಿಗೆ ಉತ್ತರಿಸಿದರು. ತರುವಾಯ ಹಲೀಸ್ ಎಂಬೋರ್ವರು ಕುರೈಶರ ದೂತನಾಗಿ ಪ್ರವಾದಿಯ(ಸ) ಬಳಿಗೆ ಹೋದರು. ಅವರು ಬರುತ್ತಿರುವರೆಂದು ತಿಳಿದಾಗ ಪ್ರವಾದಿಯವರ(ಸ) ಆಜ್ಞೆಯಂತೆ ಮುಸ್ಲಿಮರು ಬಲಿಪ್ರಾಣಿಗಳನ್ನು ಅಟ್ಟುತ್ತಾ ತಲ್ಬಿಯ; ಹೇಳಲಾರಂಭಿಸಿದರು. ಇದನ್ನು ನೋಡಿದ ಹಲೀಸ್ ಮರಳಿ ಹೋಗಿ, 'ಅವರು ಹಜ್ಜ್‌ಗಾಗಿ ಬರುತ್ತಿದ್ದಾರೆ, ಅವರನ್ನು ತಡೆಯುವ ಅಗತ್ಯವೇನಿದೆ?' ಎಂದು ಕುರೈಶರೊಡನೆ ಪ್ರಶ್ನಿಸಿದರು. 'ನೀನೊಬ್ಬ ಮುಗ್ಧ, ನಿನಗೆ ವಿಷಯ ಅರ್ಥವಾಗದು' ಎಂಬ ಉತ್ತರ ಕುರೈಶರಿಂದ ಅವರಿಗೆ ದೊರೆಯಿತು. ತಕ್ಷಣ ಕುಪಿತಗೊಂಡ ಹಲೀಸ್ ಹೇಳಿದರು: "ಕಅಬಾ ಸಂದರ್ಶನಕ್ಕಾಗಿ ಬರುವ ಜನರನ್ನು ತಡೆಯುವ ನಿಮ್ಮ ಈ ಕೆಲಸಕ್ಕೆ ನನ್ನ ಬೆಂಬಲವಿಲ್ಲ. ನೀವು ಹಾಗೆ ಮಾಡಿದರೆ ನಾನು ಮತ್ತು ನನ್ನ

ತಂಡ ದೂರವಿರುತ್ತೇವೆ." ಇದನ್ನು ಕೇಳಿ ಕುರೈಶರ ಹಮ್ಮು ಇಳಿಯಿತು. ಅವರು ಹಲೀಸ್‌ನನ್ನು ಪುಸಲಾಯಿಸಲಾರಂಭಿಸಿದರು "ನಮ್ಮನ್ನು ಕ್ಷಮಿಸಿ! ನಿಮ್ಮ ಇಚ್ಛಾನುಸಾರ ಸಂಧಾನ ನಡೆಸೋಣ."

ಮೇಲೆ ಹೇಳಿದ ತಂತ್ರದಿಂದ ನಿರೀಕ್ಷಿತ ಫಲ ದೊರೆಯದಿದ್ದರೆ ಓರ್ವ ದೂತನನ್ನು ಕಳುಹಿಸಿ ಸಂಧಾನ ಮಾತುಕತೆ ನಡೆಸೋಣವೆಂದು ಪ್ರವಾದಿ(ಸ) ಭಾವಿಸಿದ್ದರು. ಹಾಗೆಯೇ 'ಖಿರಾಶ್ ಬಿನ್ ಉಮಯ್ಯ(ರ)' ರನ್ನು ಸಂಧಾನಕಾರರಾಗಿ ನೇಮಿಸಿದರು. ಅವರು ಮಕ್ಕಾಕ್ಕೆ ತಲಪಿದಾಗ ಕುರೈಶರು ಅವರನ್ನು ಅಡ್ಡಗಟ್ಟಿ ಕೊಲ್ಲಲು ಪ್ರಯತ್ನಿಸಿದರು. ಆದರೆ ಮಕ್ಕಾದಲ್ಲಿ ಅವರ ಕುಟುಂಬವಿದ್ದುದರಿಂದ ಆ ಸಂಚು ವಿಫಲವಾಯಿತು. ಅವರು ಕೊಲೆಯತ್ನದಿಂದ ಪಾರಾದರೂ ಯಾವುದೇ ನಿರ್ಧಾರ ಕೈಗೊಳ್ಳಲಾಗದೆ ಹಾಗೆಯೇ ಮರಳಿದರು. ತರುವಾಯ ಪ್ರವಾದಿಯವರು(ಸ) ಉಸ್ಮಾನ್ ಬಿನ್ ಅಫ್ಫಾನ್‌ರನ್ನು ಕಳುಹಿಸಿದರು. ಕುರೈಶರು ಅವರೊಡನೆ ಗೌರವದಿಂದ ವರ್ತಿಸಿ, 'ನೀವು ಬೇಕಿದ್ದರೆ ಕಅಬಾ ಸಂದರ್ಶಿಸಿ ಹೋಗಿರಿ' ಎಂದು ತಿಳಿಸಿದರು. ಪ್ರವಾದಿಯವರನ್ನು(ಸ) ಬಿಟ್ಟು ನಾನೊಬ್ಬನೇ ಕಅಬಾ ಸಂದರ್ಶಿಸಬೇಕೆ? ಅದು ನನ್ನಿಂದ ಸಾಧ್ಯವಿಲ್ಲವೆಂದು ಅವರು ಪ್ರತ್ಯುತ್ತರ ನೀಡಿದರು. ಈ ಮಾತು ಕೇಳಿ ಕೆರಳಿದ ಮಕ್ಕಾ ಕುರೈಶರು ಅವರನ್ನು ಅವರ ಜತೆಗಿದ್ದ ಇತರ ಹತ್ತು ಮಂದಿಯನ್ನೂ ಬಂಧಿಸಿಟ್ಟರು.

ಉಸ್ಮಾನ್‌ರು(ರ) ಮರಳಿ ಬಾರದಿರುವುದನ್ನು ಕಂಡಾಗ ಅವರು ಹುತಾತ್ಮರಾದರೆಂಬ ವದಂತಿ ಮುಸ್ಲಿಮರಲ್ಲಿ ಹೇಗೋ ಹರಡಿ ಬಿಟ್ಟಿತು. ಇದನ್ನು ಕೇಳಿ ಪ್ರವಾದಿಯವರಿಗೆ(ಸ) ಅತ್ಯಧಿಕ ಕಳವಳವುಂಟಾಯಿತು. ಅವರು ಒಂದು ಮರದ ಬುಡದಲ್ಲಿ ಒರಗಿ ಕುಳಿತು ಮುಸ್ಲಿಮರನ್ನು ಒಟ್ಟುಗೂಡಿಸಿದರು. ತರುವಾಯ ಹೀಗೆಂದರು: "ಉಸ್ಮಾನ್‌ರ ಹತ್ಯೆಗೆ ಪ್ರತೀಕಾರವಾಗಿ ಕುರೈಶರ ವಿರುದ್ಧ ಹೋರಾಡುವ ಪ್ರಸಂಗ ಬಂದರೆ ರಣಾಂಗಣದಿಂದ ಯಾರೂ ಒಂದು ಹೆಜ್ಜೆ ಕೂಡಾ ಹಿಂದೆ ಸರಿಯುವುದಿಲ್ಲವೆಂದು ನನ್ನಲ್ಲಿ ಪ್ರತಿಜ್ಞೆ ಮಾಡಿರಿ" ಎಂದು ಕರೆ ನೀಡಿದರು. ಹಾಗೆಯೇ ಆ ಕೂಡಲೇ ಅವರೆಲ್ಲರೂ ಪ್ರತಿಜ್ಞೆ ಮಾಡಿದರು. ಈ ಐತಿಹಾಸಿಕ ಒಪ್ಪಂದವನ್ನು ಪವಿತ್ರ ಕುರ್‌ಆನಿನಲ್ಲಿ ಬಹಳವಾಗಿ ಪ್ರಶಂಸಿಸಲಾಗಿದೆ.

ಈ ಸುದ್ದಿ ಕುರೈಶರ ಕಿವಿಗೆ ತಲಪಿತು. ಮುಸ್ಲಿಮರ ಆತ್ಮಸ್ಥೈರ್ಯವನ್ನು ಅವರು ಮೊದಲೇ ಅರಿತಿದ್ದರು. ಇದರಿಂದ ಅವರ ಅಂತರಂಗದಲ್ಲಿ ಬದಲಾವಣೆಯುಂಟಾಯಿತು. ಒಂದು ಯುದ್ಧ ಅನಿವಾರ್ಯವಾಗಿದೆ. ಹಿಂದಿನಂತೆ ಈ ಬಾರಿ ಮುಸ್ಲಿಮರನ್ನು ಎದುರಿಸಲು ಸಾಧ್ಯವಿಲ್ಲ. ಎದುರಿಸಿದರೆ ಸೋಲು ಖಚಿತ. ಭೀತಿಯು ಅವರನ್ನು ನಡುಗಿಸುತ್ತದೆ! ಕಳವಳ ಮತ್ತು ನಿರಾಶೆಯ ಕಾರ್ಮೋಡಗಳು ಅವರ ಮುಖಗಳಲ್ಲಿ ಆವರಿಸುತ್ತದೆ! ಆ ಕೂಡಲೇ

ಅವರು ಊರಿನ ಮೂವರು ಗಣ್ಯರನ್ನು ತಮ್ಮ ಸಂಧಾನಕಾರರಾಗಿ ಪ್ರವಾದಿಯವರ(ಸ) ಬಳಿಗೆ ಕಳುಹಿಸುತ್ತಾರೆ. ಆ ಮೂರು ಮಂದಿಯಲ್ಲಿ ಸುಹೈಲ್ ಬಿನ್ ಅಮ್ರ್ ಕೂಡಾ ಇದ್ದರು. ವಿವಾದಗಳಲ್ಲಿ ತೀರ್ಮಾನ ಕೈಗೊಳ್ಳುವ ಸಂಪೂರ್ಣ ಅಧಿಕಾರವನ್ನು ಅವರಿಗೆ ನೀಡಲಾಗಿತ್ತು. ಉಳಿದೀರ್ವರು ಸಮಾಲೋಚನೆಯಲ್ಲಿ ಅವರ ಸಹಕಾರಿಗಳಾಗಿದ್ದರು. ಸುಹೈಲ್ ಬಂದ ಕೂಡಲೇ ಪ್ರವಾದಿಯವರೊಡನೆ(ಸ), 'ಹುದೈಬಿಯಾದಲ್ಲಿ ನಡೆದ ಸಂಘರ್ಷದಲ್ಲಿ ಮುಹಮ್ಮದ್ ಬಿನ್ ಮಸ್ಲಮ: ಬಂಧಿಸಿಟ್ಟ ಮಂದಿಯನ್ನು ನೀವು ನಮಗೆ ಬಿಟ್ಟುಕೊಡಬೇಕೆಂದು ಹೇಳಿದ.' "ಉಸ್ಮಾನ್ ಮತ್ತು ಅವರ ಸಂಗಡಿಗರನ್ನು ಬಿಡಿರಿ; ಹಾಗಾದರೆ ನಾವು ಅವರನ್ನು ವಿಮೋಚನೆಗೊಳಿಸುತ್ತೇವೆ" ಎಂದು ಪ್ರವಾದಿ(ಸ) ಉತ್ತರಿಸಿದರು. ಉಭಯ ತಂಡಗಳೂ ತಂತಮ್ಮ ಬೇಡಿಕೆಗಳನ್ನು ಪರಸ್ಪರ ಒಪ್ಪಿ ಎರಡು ಕಡೆಯ ಕೈದಿಗಳನ್ನೂ ಬಿಡುಗಡೆಗೊಳಿಸಿದರು.

ತರುವಾಯ ಈ ಕೆಳಗಿನ 4 ಶರತ್ತುಗಳ ಆಧಾರದಲ್ಲಿ ಪರಸ್ಪರ ಒಪ್ಪಂದವಾಗ ಬೇಕೆಂದು ಸುಹೈಲ್ ಹೇಳಿದ-

1. ಈ ವರ್ಷ ನೀವು ಹಜ್ಜ್ ಅಥವಾ ಉಮ್ರಾಕ್ಕೆ ಬರಬಾರದು, ಇಲ್ಲಿಂದ ಹಿಂತಿರುಗಬೇಕು.

2. ಬೇಕಿದ್ದರೆ ಮುಂದಿನ ವರ್ಷ ಬಂದು ಹಜ್ಜ್ ಅಥವಾ ಉಮ್ರಾ ನಿರ್ವಹಿಸ ಬಹುದು. ಆದರೆ ಮಕ್ಕಾದಲ್ಲಿ ಮೂರು ದಿನಗಳಿಗಿಂತ ಹೆಚ್ಚು ನಿಲ್ಲಬಾರದು. ಮುಸ್ಲಿಮರ ಬಳಿ ಕೇವಲ ಒಂದು ಖಡ್ಗದ ಹೊರತು ಬೇರೇನೂ ಇರಬಾರದು.

3. ಹತ್ತು ವರ್ಷಗಳ ಕಾಲ ನಮ್ಮ ಮಧ್ಯೆ ಶಾಂತಿ ಕಾಪಾಡಬೇಕು. ನಾವು ಪರಸ್ಪರರಿಗೆ ಕಾಟ ಕೊಡಬಾರದು ಮತ್ತು ಯುದ್ಧ ಮಾಡಬಾರದು.

4. ಯಾರಾದರೂ ಇಲ್ಲಿಂದ ನಮ್ಮ ಅನುಮತಿಯಿಲ್ಲದೆ ನಿಮ್ಮ ಬಳಿಗೆ ಬಂದರೆ ನೀವು ಅವರನ್ನು ಹಿಂದಕ್ಕೆ ಕಳುಹಿಸಬೇಕು. ಆದರೆ ನಿಮ್ಮ ಕಡೆಯಿಂದ ಯಾರಾದರೂ ನಮ್ಮ ಬಳಿಗೆ ಬಂದರೆ ನಾವು ಅವರನ್ನು ಮರಳಿಸಲಾರೆವು.

ಶರತ್ತುಗಳು ಸಂಪೂರ್ಣ ಏಕಪಕ್ಷೀಯವಾಗಿದ್ದುವು. ಆದರೂ ಪ್ರವಾದಿಯವರು(ಸ) ಆ ಅನ್ಯಾಯಪೂರ್ಣ ಶರತ್ತುಗಳನ್ನು ಒಪ್ಪಿದರು. ಉಮರ್(ರ) ಈ ಒಪ್ಪಂದ ಮತ್ತು ಅದರ ಶರತ್ತುಗಳನ್ನು ಕೇಳಿ ಬೆಚ್ಚಿಬಿದ್ದರು. ಅವರು ಒಪ್ಪಂದದಲ್ಲಿರುವ ದೋಷಗಳತ್ತ ಪ್ರವಾದಿಯವರ(ಸ) ಗಮನ ಸೆಳೆಯಲಿಕ್ಕಾಗಿ, "ಅಲ್ಲಾಹನ ಸಂದೇಶವಾಹಕರೆ! ನಿಮಗೆ ಇದರಿಂದ ತೃಪ್ತಿಯಾಗಿದೆಯೇ?" ಎಂದು ಪ್ರಶ್ನಿಸಿದರು. ಉಮರ್‌ರ(ರ) ಪ್ರಶ್ನೆಯ ಇಂಗಿತವನ್ನು ಅರ್ಥಮಾಡಿಕೊಂಡ ಪ್ರವಾದಿಯವರು(ಸ) ಹೀಗೆಂದರು: "ಅದರಲ್ಲಿ ಯಾವ

ಆಕ್ಷೇಪವೂ ಇಲ್ಲ. ಏಕೆಂದರೆ, ಅವರ ಕೂಟದಿಂದ ಯಾರಾದರೂ ಮುಸ್ಲಿಮರಾಗಿ ನಮ್ಮ ಬಳಿಗೆ ಬಂದರೆ, ನಾವು ಆತನನ್ನು ಹಿಂದಕ್ಕೆ ಕಳುಹಿಸಿದರೆ ಅಲ್ಲಾಹನೇ ಆತನ ಸಹಾಯಕ ಮತ್ತು ಸಂರಕ್ಷಕನಾಗಿರುತ್ತಾನೆ. ನಮ್ಮ ಕೂಟದ ಯಾರೊಬ್ಬರೂ ಅವರ ಆಶ್ರಯ ಪಡೆಯಲಾರರು. ಒಂದು ವೇಳೆ ಯಾರಾದರೂ ಹಾಗೆ ಹೋದರೆ ಅವರು ಧರ್ಮಭ್ರಷ್ಟರಾಗಿ ಹೋಗುತ್ತಾರೆ, ಅಂತಹ ಜನರಿಂದ ನಮಗೇನೂ ಪ್ರಯೋಜನವಿಲ್ಲ."

ಪ್ರವಾದಿ(ಸ) ಮತ್ತು ಉಮರ್‌ರು(ರ) ಪರಸ್ಪರ ಮಾತಾಡುತ್ತಿದ್ದಾರೆ. ಅಷ್ಟರಲ್ಲಿ ಒಬ್ಬರು 'ಕಲಿಮ' ಹೇಳುತ್ತಾ ಮುಸ್ಲಿಮರ ಕಡೆಗೆ ಬರುತ್ತಿದ್ದಾರೆ. ಕುರೈಶರ ಅಧಿಕೃತ ಪ್ರತಿನಿಧಿಯಾಗಿದ್ದ 'ಸುಹೈಲ್'ನ ಪುತ್ರ ಅಬೂ ಜಂದಲ್(ರ). ಅವರು ಈಚೆಗಷ್ಟೇ ಇಸ್ಲಾಮ್ ಸ್ವೀಕರಿಸಿದ್ದರು. ಅಂದಿನಿಂದ ತಂದೆಯ ಬಂಧನದಲ್ಲಿದ್ದರು. "ಇದು ಒಪ್ಪಂದ ಆಗುತ್ತಿರುವಾಗ ನಡೆದ ಮೊದಲ ಘಟನೆ. ಅಬೂಜಂದಲ್ ಬಂದು ಮುಸ್ಲಿಮರೊಂದಿಗೆ ಸೇರಿದುದನ್ನು ನೋಡಿ ಎಂದು ಒಪ್ಪಂದದ ನಾಲ್ಕನೆಯ ಶರತ್ತಿನಂತೆ ಆತನನ್ನು ನಮಗೆ ಒಪ್ಪಿಸಿರಿ" ಸುಹೈಲ್ ಹೇಳಿದರು. "ಇನ್ನೂ ಒಪ್ಪಂದ ಪೂರ್ತಿಯಾಗಿಲ್ಲವಲ್ಲ" ಎಂದು ಪ್ರವಾದಿ(ಸ) ಹೇಳಿದರು. "ನೀವು ಈತನನ್ನು ಹಿಂದಿರುಗಿಸದಿದ್ದರೆ ನಮ್ಮ ನಡುವೆ ಒಪ್ಪಂದ ನಡೆಯಲಾರದು" ಸುಹೈಲ್ ದೃಢಸ್ವರದಲ್ಲಿ ಹೇಳಿದರು. ಅದಕ್ಕಾಗಿ ಪ್ರವಾದಿಯವರು(ಸ) ಹಠ ಹಿಡಿಯಲಿಲ್ಲ. "ಸರಿ. ಆತನನ್ನು ಕರೆದೊಯ್ಯಿರಿ. ಆದರೆ ಆತನನ್ನು ಹಿಂಸಿಸಬಾರದು." ಪ್ರವಾದಿಯವರು(ಸ) ಸುಹೈಲ್‌ನೊಡನೆ ಹೇಳಿದರು. ಸುಹೈಲ್ ಅದಕ್ಕೆ ಒಪ್ಪಿದ.

ತರುವಾಯ ಕರಾರು ಪತ್ರ ಬರೆಯುವ ಕುರಿತು ಮಾತುಕತೆ ನಡೆಯಿತು. ಅಲೀಯವರೊಂದಿಗೆ(ರ) ಬರೆಸೋಣವೆಂದು ಸುಹೈಲ್ ಅಭಿಪ್ರಾಯಪಟ್ಟರು. ಪ್ರವಾದಿ(ಸ) ಒಪ್ಪಿದರು. ಹಾಗೆಯೇ ಅಲೀಯವರು(ರ) ಪ್ರವಾದಿವರ್ಯರ(ಸ) ಬಳಿಗೆ ಬಂದಾಗ ಅವರು ಹೀಗೆ ಆಜ್ಞಾಪಿಸಿದರು: "ಬರೆಯಿರಿ, ಪರಮ ದಯಾಳುವೂ, ಕರುಣಾಳುವೂ ಆದ (ರಹ್ಮಾನ್ ಮತ್ತು ರಹೀಮನಾದ) ಅಲ್ಲಾಹನ ನಾಮದಿಂದ." ಆಗ ಸುಹೈಲ್ ಮಧ್ಯದಲ್ಲಿ ತಡೆದು ಹೀಗೆಂದ: "ನಿಮ್ಮ ರಹ್ಮಾನ್ ರಹೀಮ್ ಏನೂ ನಮಗೆ ತಿಳಿದಿಲ್ಲ. ನಾವು ಸಾಮಾನ್ಯವಾಗಿ ಬರೆಯುವಂತೆ, ಬಿಸ್ಮಿಕ (ನಿನ್ನ ನಾಮದಲ್ಲಿ) ಅಂತ ಬರೆಯಿರಿ." "ಆಗಲಿ, ಅಲೀ, 'ಬಿಸ್ಮಿಕಲ್ಲಾಹುಮ್ಮ' (ಅಲ್ಲಾಹನೇ, ನಿನ್ನ ಹೆಸರಲ್ಲಿ) ಅಂತ ಬರೆಯಿರಿ" ಪ್ರವಾದಿಯವರು(ಸ) ಸುಹೈಲ್‌ನ ಮಾತನ್ನು ತಿದ್ದಿ ಹೇಳಿದರು. ಸುಹೈಲ್ ಅದನ್ನು ವಿರೋಧಿಸದಿದ್ದುದರಿಂದ ಹಾಗೆಯೇ ಬರೆದ ಬಳಿಕ ಪ್ರವಾದಿಯವರು(ಸ) "ಇದು ಅಲ್ಲಾಹನ ಪ್ರವಾದಿ ಮುಹಮ್ಮದ್ ತೀರ್ಮಾನಿಸಿದ್ದು" ಎಂದು ಬರೆಯಿರಿ. ಅಲೀ(ರ) ಆ ವಾಕ್ಯವನ್ನು ಬರೆದರು. "ದೇವನ ಪ್ರವಾದಿಯೆಂದು ಬರೆಯ ಬೇಡಿ; ಏಕೆಂದರೆ ನಾವು ಇವರನ್ನು ಅಲ್ಲಾಹನ ಪ್ರವಾದಿಯೆಂದು ಪರಿಗಣಿಸಿಲ್ಲ. ಹಾಗೆ ಪರಿಗಣಿಸಿದ್ದರೆ ಕಅಬಾ ಸಂದರ್ಶನಕ್ಕೆ ಅವರನ್ನು

ಅಡ್ಡಿಪಡಿಸುತ್ತಿರಲಿಲ್ಲ. ಅಬ್ದುಲ್ಲಾರ ಪುತ್ರ ಮುಹಮ್ಮದ್ ಎಂದು ಬರೆಯಿರಿ." ಸುಹೈಲ್ ಪುನಃ ಅಡ್ಡಿಪಡಿಸಿದರು. "ನೀವು ನನ್ನನ್ನು ನಿರಾಕರಿಸಿದರೂ ನಾನು ಅಲ್ಲಾಹನ ಪ್ರವಾದಿಯೇ ಆಗಿದ್ದೇನೆ; ಅಬ್ದುಲ್ಲಾರ ಪುತ್ರನೂ ಹೌದು." ಪ್ರವಾದಿಯವರು(ಸ) ಸುಹೈಲ್‌ನೊಡನೆ ದೃಢ ಸ್ವರದಿಂದ ಹೇಳಿದರು- ತರುವಾಯ ಅಲೀಯೊಡನೆ(ರ) ಹೀಗೆಂದರು: "ಸರಿ. ದೇವ ಪ್ರವಾದಿ ಯೆಂಬುದನ್ನು ಹೊಡೆದು ಅಬ್ದುಲ್ಲಾರ ಪುತ್ರ ಎಂದು ಬರೆಯಿರಿ." ಅಲ್ಲಾಹನ ಪ್ರವಾದಿ ಎಂಬ ವಾಕ್ಯವನ್ನು ತನ್ನ ಕೈಯಿಂದ ಹೊಡೆದು ಹಾಕಲು ಅಲೀಯವರ(ರ) ಮನಸ್ಸು ಒಪ್ಪಲಿಲ್ಲ. ಅವರು ಸಂಕೋಚ ಪಟ್ಟರು. ಆಗ ಪ್ರವಾದಿವರ್ಯರು(ಸ) ತಮ್ಮ ಪಾವನ ಕೈಯಿಂದಲೇ ಅದನ್ನು ಅಳಿಸಿದರು. ಅಲ್ಲಿ ಅಬ್ದುಲ್ಲಾರ ಪುತ್ರ ಎಂದು ಬರೆಸಿದರು. ತರುವಾಯ ಅಲೀಯವರು(ರ) ಸಂಧಾನದ ಶರತ್ತುಗಳನ್ನು ಬರೆದರು. ಅದರಲ್ಲಿ ಉಭಯ ಪಕ್ಷದವರಿಗೂ ಭಿನ್ನಾಭಿಪ್ರಾಯವಿರಲಿಲ್ಲ. ಆ ಬಳಿಕ ಕರಾರು ಪತ್ರದಲ್ಲಿ ಉಭಯ ಪಕ್ಷದ ನಾಯಕರೂ ಸಹಿಹಾಕಿದರು. ಅದನ್ನು ಸುಹೈಲ್‌ರಿಗೆ ಒಪ್ಪಿಸಲಾಯಿತು.

ಒಪ್ಪಂದದ ಶರತ್ತಿನಂತೆ ಪ್ರವಾದಿಯವರು(ಸ) ಅಲ್ಲಿಯೇ ಕ್ಷೌರ ಮಾಡಿ ಬಲಿಕರ್ಮ ನಿರ್ವಹಿಸಿದರು. ಆ ಬಳಿಕ ಇತರರೂ ಹಾಗೆಯೇ ಮಾಡಿದರು. ಅನಂತರ ಎಲ್ಲರೂ ಮದೀನಾಕ್ಕೆ ಮರಳಿದರು. ದಾರಿಯಲ್ಲಿ 'ಇನ್ನಾ ಫತಹ್ನಾ' ಎಂದು ಆರಂಭವಾಗುವ ಸೂರಃ ಫತ್ಹ್ ಅವತೀರ್ಣಗೊಂಡಿತು. ಇದರಲ್ಲಿ ಅಲ್ಲಾಹನು ಮುಸ್ಲಿಮರಿಗೆ ಇಹ-ಪರ ಸುಖ ಸೌಭಾಗ್ಯ ಲಭಿಸುವುದೆಂದೂ ವೈರಿಗಳ ವಿರುದ್ಧ ವಿಜಯ ಮತ್ತು ನೆರವು ದೊರೆಯುವು ದೆಂದೂ ದೃಢ ಸ್ವರದಲ್ಲಿ ವಾಗ್ದಾನ ಮಾಡಿದ್ದನು. ಕರುಣಾನಿಧಿಯಾದ ತಮ್ಮ ಪ್ರಭುವಿನ ಕೃಪಾಕಟಾಕ್ಷವು ತುಂಬಿ ತುಳುಕುವ ಈ ಒಪ್ಪಂದದಿಂದ ಮುಸ್ಲಿಮರಿಗೆ ಅತಿಯಾದ ಸಂತೋಷವಾಯಿತು. ಇದರಿಂದ ಹುದೈಬಿಯಾ ಸಂಧಿಯ ಬಗ್ಗೆ ಅವರಿಗಿದ್ದ ಸಂದೇಹ ಮತ್ತು ಬೇಸರವು ಹರ್ಷೋಲ್ಲಾಸವಾಗಿ ಮಾರ್ಪಟ್ಟಿತು.

ಈ ಒಪ್ಪಂದದಿಂದ ಸಂಭವಿಸಿದ ಇನ್ನೊಂದು ಪ್ರಮುಖ ಘಟನೆಯು ಗಮನಾರ್ಹ ವಾಗಿದೆ. ಒಪ್ಪಂದದ ಕೊನೆಯ ಶರತ್ತನ್ನು ರದ್ದುಪಡಿಸಬೇಕೆಂದು ಒತ್ತಾಯಿಸುವಂತೆ ಕುರೈಶರನ್ನು ಪ್ರೇರೇಪಿಸಿದ ಸ್ವಾರಸ್ಯಕರ ಘಟನೆ!

ಪ್ರವಾದಿಯವರು(ಸ) ಮದೀನಾಕ್ಕೆ ಮರಳಿದ ಬಳಿಕ 'ಅಬೂ ಬಶೀರ್ ಉತ್ಬ ಬಿನ್ ಉಸೈದ್ ಸಖ್ಫಿ' ಎಂಬೋರ್ವರು ಮುಸ್ಲಿಮನಾಗಿ ಮಕ್ಕಾದಿಂದ ಪಲಾಯನ ಮಾಡಿ ಮದೀನಾದಲ್ಲಿ ಆಶ್ರಯ ಪಡೆದರು. ಅವರನ್ನು ಹಿಂದಕ್ಕೆ ಕರೆತರಲು ಇಬ್ಬರು ಕುರೈಶರು ಕೂಡಲೇ ಮದೀನಾಕ್ಕೆ ಹೊರಟರು. ಅವರು ಪ್ರವಾದಿಯವರ(ಸ) ಬಳಿ ಬಂದು, "ಅಬೂ ಬಶೀರ್‌ನನ್ನು ನಮಗೆ ಒಪ್ಪಿಸಿರಿ" ಎಂದು ಹೇಳಿದರು. ಪ್ರವಾದಿಯವರು(ಸ) ಒಲ್ಲದ ಮನಸ್ಸಿನಿಂದ ಅಬೂ ಬಶೀರ್‌ನನ್ನು ಅವರಿಗೆ ಮರಳಿಸಿದರು. ಅಂತೆಯೇ ಅಬೂ ಬಶೀರ್

ಮದೀನಾಕ್ಕೆ ಹೊರಟಾಗ ಪ್ರವಾದಿಯವರು(ಸ) ಆತನನ್ನು ಸಮಾಧಾನಪಡಿಸುತ್ತಾ ಹೀಗೆಂದರು: "ಅಬೂ ಬಶೀರ್, ನಾವು ಕುರೈಶರೊಡನೆ ನಾಲ್ಕು ಶರತ್ತುಗಳ ಒಪ್ಪಂದವನ್ನು ಮಾಡಿಕೊಂಡಿರುವುದು ನಿಮಗೆ ತಿಳಿದಿದೆಯಲ್ಲವೇ. ಅದರಲ್ಲಿ ಮಕ್ಕಾದಿಂದ ಯಾರಾದರೂ ಇಸ್ಲಾಮ್ ಸ್ವೀಕರಿಸಿ ಕುರೈಶರ ಒಪ್ಪಿಗೆಯಿಲ್ಲದೆ ನಮ್ಮ ಬಳಿಗೆ ಬಂದರೆ ಅವರು ಅಪೇಕ್ಷಿಸಿದರೆ ನಾವು ಅವರನ್ನು ಹಿಂತಿರುಗಿಸಬೇಕೆಂಬ ನಿಬಂಧನೆಯಿದೆ. ಆದ್ದರಿಂದ ಆ ನಿಬಂಧನೆಯಂತೆ ನಾವು ವರ್ತಿಸದೆ ಗತ್ಯಂತರವಿಲ್ಲ. ಹೋಗಿರಿ, ಅಲ್ಲಾಹನು ನಿಮಗೆ ನೆರವಾಗುವನು- ಅವರ ಮರ್ದನಗಳಿಂದ ಖಂಡಿತವಾಗಿಯೂ ನಿಮ್ಮನ್ನು ರಕ್ಷಿಸುವನು." ತರುವಾಯ ಅಬೂ ಬಶೀರ್(ರ) ಪ್ರವಾದಿಯವರನ್ನು(ಸ) ಬೀಳ್ಕೊಂಡು ತನ್ನನ್ನು ಕರೆದೊಯ್ಯಲು ಬಂದ ಕುರೈಶರೊಡನೆ ಮಕ್ಕಾಕ್ಕೆ ಮರಳಿದರು.

ಅವರು ಮೂವರೂ ಮದೀನಾದಿಂದ ಸ್ವಲ್ಪ ದೂರ ಸಾಗಿದ್ದರು. ಹಿಂಸೆಯ ಬಾಯಿಗೆ ಎಳೆದೊಯ್ಯುವುದನ್ನು ಗ್ರಹಿಸಿ ಅಬೂ ಬಶೀರ್‌ರ ತಾಳ್ಮೆಗೆಟ್ಟಿತು. ಅವರು ಸಂಗಡಿಗರಲ್ಲೋರ್ವನ ಖಡ್ಗವನ್ನು ಉಪಾಯದಿಂದ ಹೊರಗೆಳೆದು ಒಬ್ಬನನ್ನು ಕೊಂದು ಬಿಟ್ಟರು. ಇದನ್ನು ನೋಡಿ ಇನ್ನೊಬ್ಬನು ಓಡಿ ಪಾರಾದ. ಆತ ನೇರವಾಗಿ ಪ್ರವಾದಿ ಯವರ(ಸ) ಬಳಿಗೆ ಹೋಗಿ ದಾರಿಯಲ್ಲಿ ನಡೆದ ಘಟನೆಯನ್ನು ವಿವರಿಸಿದ. ಅಷ್ಟರಲ್ಲಿ ಅಬೂ ಬಶೀರ್(ರ) ಕೂಡಾ ಅಲ್ಲಿಗೇ ಮರಳಿ ಬಂದರು. ಪ್ರವಾದಿಯವರೊಂದಿಗೆ ನಡೆಸಿದ ಸಂಭಾಷಣೆಯಿಂದ ಅವರು ಪುನಃ ನನ್ನನ್ನು ಮಕ್ಕಾಕ್ಕೆ ಕಳುಹಿಸುವರೆಂದು ಅಬೂ ಬಶೀರ್‌ರಿಗೆ ಮನವರಿಕೆಯಾಯಿತು. ಆದ್ದರಿಂದ, ಅವರು ಮಸೀದಿಯಿಂದ ಮೆಲ್ಲನೆ ಹೊರ ಬಂದು ತೀರ ಪ್ರದೇಶದ ಮೂಲಕ ಪ್ರಯಾಣ ಬೆಳೆಸಿದರು. 'ಐಸ್' ಎಂಬ ಸ್ಥಳಕ್ಕೆ ಹೋಗಿ ಅಲ್ಲಿ ನೆಲೆಸಿದರು. ಕುರೈಶರ ವ್ಯಕ್ತಿಯು ನಿರಾಶನಾಗಿ ಮರಳಿ ಹೋದನು.

'ಹುದೈಬಿಯಾ' ಒಪ್ಪಂದದ ಬಳಿಕ ಮಕ್ಕಾ ನಿವಾಸಿಗಳು ಭಾರೀ ಪ್ರಮಾಣದಲ್ಲಿ ಇಸ್ಲಾಮ್ ಸ್ವೀಕರಿಸಿದರು. ಒಪ್ಪಂದದ ಹಿನ್ನೆಲೆಯಲ್ಲಿ ಕುರೈಶರು ಅವರನ್ನು ನಿರ್ದಯವಾಗಿ ಹಿಂಸಿಸಿದರು. ಈ ಕ್ರೂರ ಮರ್ದನದ ಕಾಠಿಣ್ಯ ದಿನೇ ದಿನೇ ಹೆಚ್ಚುತ್ತಿತ್ತು. ಅಸಹಾಯಕ ಮುಸ್ಲಿಮ್ ಮರ್ದಿತರ ಸಹನೆಯ ಕಟ್ಟೆಯೊಡೆಯಲಾರಂಭವಾಯಿತು.

ಅಬೂ ಬಶೀರ್(ರ) ಯಾರ ಹಂಗೂ ಇಲ್ಲದೆ ತೀರ ಪ್ರದೇಶದ 'ಐಸ್'ನಲ್ಲಿ ವಾಸವಾಗಿದ್ದಾರೆ. ಅವರಿಗೆ ಅಲ್ಲಿ ಅಲ್ಲಾಹನ ಹೊರತು ಬೇರೆ ಯಾರ ಭಯವೂ ಇಲ್ಲದೆ ನಿಶ್ಚಿಂತರಾಗಿದ್ದಾರೆ. ಅವರು ಏಕಾಂತದಲ್ಲಿ ಅಲ್ಲಾಹನ ಆರಾಧನೆಯಲ್ಲಿ ತಲ್ಲೀನರಾಗಿದ್ದಾರೆ. ಈ ವಿಷಯ ಮಕ್ಕಾದ ಮುಸ್ಲಿಮರಿಗೂ ತಿಳಿದಿತ್ತು. ಪರಿಸ್ಥಿತಿ ಕೈ ಮೀರಿದಾಗ ಅವರು ಮಕ್ಕಾದಿಂದ ತಪ್ಪಿಸಿ ಕೊಂಡು ಅಲ್ಲಿಗೆ ಬರಲಾರಂಭಿಸಿದರು. ಒಪ್ಪಂದದ ದಿನ ಕುರೈಶರು

ಹಿಂದಕ್ಕೆ ಕರೆದೊಯ್ದಿದ್ದ ಅಬೂ ಜಂದಲ್(ರ) ಕೂಡಾ ಅವರಲ್ಲಿದ್ದರು. ಒಟ್ಟಿನಲ್ಲಿ ಸುಮಾರು 300 ಮಂದಿಯ ತಂಡವು ಅಬೂ ಬಶೀರ್‌ರ(ರ) ಬಳಿಗೆ ಬಂತು!

ಇವರು ವಾಸವಾಗಿದ್ದ 'ಐಸ್' ಪ್ರದೇಶವು ಕುರೈಶರು ಸಿರಿಯಾಕ್ಕೆ ವ್ಯಾಪಾರಕ್ಕಾಗಿ ಹೋಗುತ್ತಿದ್ದ ರಾಜಮಾರ್ಗದ ಸನಿಹದಲ್ಲಿತ್ತು. ಆದ್ದರಿಂದ ಮುಸ್ಲಿಮರಿಗೆ ತಮ್ಮ ವ್ಯಥೆಯನ್ನು ತಣಿಸಲು ಮತ್ತು ವೈರಿಗಳ ದೌರ್ಜನ್ಯಗಳಿಗಾಗಿ ಸೇಡುತೀರಿಸುವ ಸದವಕಾಶ ದೊರೆಯಿತು. ತಂಡವು ಸಿರಿಯಾಕ್ಕೆ ಹೋಗುವಾಗ ಅಬೂ ಬಶೀರ್‌ರ(ರ) ಈ ಸ್ವತಂತ್ರ ತಂಡದಿಂದ ಕುರೈಶರ ವ್ಯಾಪಾರಿಗೆ ಸೊತ್ತು ಮತ್ತು ಪ್ರಾಣ ಹಾನಿಯಾಗುತ್ತಿತ್ತು.

ಈ ತಿರುಗೇಟು ಬೀಳಲಾರಂಭಿಸಿದಾಗ ಕುರೈಶರು ಒಪ್ಪಂದದ ನಾಲ್ಕನೆಯ ಶರತ್ತಿನ ಬಗ್ಗೆ ಬೆರಳು ಕಚ್ಚಿದರು. ಗತ್ಯಂತರವಿಲ್ಲದೆ ಅವರು ಪ್ರವಾದಿಯವರ(ಸ) ಬಳಿಗೆ ಜನ ಕಳುಹಿಸಿದರು. "ನಾವು ಒಪ್ಪಂದದ ನಾಲ್ಕನೆ ಶರತ್ತನ್ನು ರದ್ದುಪಡಿಸಿದ್ದೇವೆ. ಆದ್ದರಿಂದ ನೀವು ಅಬೂ ಬಶೀರ್‌ನ ತಂಡವನ್ನು ಮದೀನಾಕ್ಕೆ ಕರೆಸಿಕೊಳ್ಳಬೇಕು" ಎಂದು ವಿನಂತಿಸಿದರು. ಪ್ರವಾದಿ ಯವರು(ಸ) ಅವರ ಮನವಿಯನ್ನು ಸ್ವೀಕರಿಸಿದರು. ತಂಡದ ಜತೆ ಮದೀನಕ್ಕೆ ಬರುವಂತೆ ಅಬೂ ಬಶೀರ್‌ರಿಗೆ(ರ) ಆದೇಶ ಕಳುಹಿಸಿದರು. ಈ ಆದೇಶ ತಲಪಿದಾಗ ಅಬೂ ಬಶೀರ್(ರ) ರೋಗ ಶಯ್ಯೆಯಲ್ಲಿದ್ದರು. ಪ್ರವಾದಿಯವರ(ಸ) ಆಜ್ಞೆ ದೊರೆತ ಕೂಡಲೇ ಅವರು ಅದನ್ನು ತಲೆ ಮತ್ತು ಕಣ್ಣುಗಳ ಮೇಲಿರಿಸಿ ಹಲವು ಬಾರಿ ಚುಂಬಿಸಿದರು. ಅವರ ಕೊನೆಯ ಗಳಿಗೆ ಸಮೀಪಿಸಿತ್ತು. ತಮ್ಮ ಆತ್ಮವು ಆ ಸಂತೋಷದಾಯಕ ವಾರ್ತೆಯೊಂದಿಗೆ ಹಾರಿ ಹೋಗಲು ಹಾತೊರೆಯುತ್ತಿತ್ತೆಂದು ಭಾಸವಾಗುವಂತೆ ಪ್ರವಾದಿಯವರ(ಸ) ಸಂದೇಶವನ್ನು ಮುಖದ ಮೇಲಿರಿಸಿ ಅವರು ನಿಧನರಾದರು. ಅವರ ಸಮಾಧಿಯ ಸಮೀಪ ಅಬೂ ಜಂದಲ್(ರ) ಒಂದು ಮಸೀದಿ ನಿರ್ಮಿಸಿದರು. ತರುವಾಯ ಪ್ರವಾದಿಯವರ(ಸ) ಆಜ್ಞೆ ಪ್ರಕಾರ ಅಬೂ ಜಂದಲ್ ಮತ್ತು ಸಂಗಡಿಗರು ಮದೀನಾಕ್ಕೆ ಹೋದರು. (ವಿವಿಧ ಹದೀಸ್‌ಗಳ ಸಾರಾಂಶ)

**ಟಿಪ್ಪಣಿಗಳು:**

1. ಈ ಒಪ್ಪಂದವು ಒಂದೆಡೆ ಪ್ರವಾದಿಯವರ(ಸ) ವಿಶೇಷ ಸಹಿಷ್ಣುತೆಯನ್ನೂ ಇನ್ನೊಂದೆಡೆ ಅವರ ಅತಿ ಕೌಶಲ್ಯದ ರಾಜಕೀಯ ದೂರ ದೃಷ್ಟಿಯನ್ನೂ ನಿಚ್ಚಳಪಡಿಸುತ್ತದೆ. ಅದರ ನಿಬಂಧನೆಗಳು ಅನ್ಯಾಯ ಮತ್ತು ಏಕಪಕ್ಷೀಯವಾಗಿದ್ದರೂ ಪ್ರವಾದಿಯವರು(ಸ) ಅದಕ್ಕೆ ಒಪ್ಪಿದರು. ಆರಂಭದಲ್ಲಿ ನಿಬಂಧನೆಯನ್ನು ವೈರಿಗಳು ಕೇವಲ ತಮ್ಮ ದುಷ್ಟ ಹಠ ಸಾಧನೆಗಾಗಿ ಮಂಡಿಸಿದ್ದರು. ಮುಸ್ಲಿಮರು ಬಹಳ ಕಷ್ಟದಿಂದ ಪಯಣಿಸಿ ಅಲ್ಲಿಗೆ ತಲಪಿದ್ದರು. ಅದರ ಅಗತ್ಯವೇನಿತ್ತೆಂದು ಅವರು ಅದನ್ನು ತುಚ್ಛೀಕರಿಸಿದರು. ಪ್ರಸ್ತುತ

ಬೇಡಿಕೆಗಾಗಿ ಅಲ್ಲಿಗೆ ಬರುವ ಯಾತ್ರಿಕರನ್ನು ತಡೆಯುವುದು ಅನ್ಯಾಯವಲ್ಲವೇ. ಮಾತ್ರವಲ್ಲ, ಅದು ಕುರೈಶರು ಆಚರಿಸುವ ಧರ್ಮಕ್ಕೂ ನಿಲುಕದ್ದಾಗಿದೆ. ನಾಲ್ಕನೆಯ ನಿಬಂಧನೆಯು ಸತ್ಯವನ್ನು ದಾರುಣವಾಗಿ ಕೊಲ್ಲುವಂತದ್ದಾಗಿದೆ. ಕೇವಲ ಒಂದೇ ಪಕ್ಷದ ಹಿತಬಯಸುವ ಕಠೋರ ನಿಬಂಧನೆ. ಎರಡು ಮತ್ತು ಮೂರನೆಯ ನಿಬಂಧನೆಗಳು ಅಷ್ಟೊಂದು ಹಾನಿಕರವಲ್ಲದಿದ್ದರೂ ಉಭಯ ಪಕ್ಷಗಳ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಅವಲೋಕಿಸುವಾಗ ಅದರಲ್ಲಿಯೂ ಅನ್ಯಾಯವಿದೆ. ಆದರೂ, ಪ್ರವಾದಿಯವರು(ಸ) ಅವೆಲ್ಲಕ್ಕೂ ಸಮ್ಮತಿಸಿದ್ದೇಕೆ? ವಸ್ತುತಃ ಸಹಿಷ್ಣುತೆಯ ಈ ವಿಶಾಲ ಮಾರ್ಗವನ್ನು ಅನುಸರಿಸಿ ಪ್ರವಾದಿಯವರು(ಸ) ಒಂದು ಮಹಾ ದುರಂತವಾಗಿ ಪರಿಣಮಿಸ ಬಹುದಾಗಿದ್ದ ಭಾರೀ ಬಿಕ್ಕಟ್ಟಿಗೆ ಪರಿಹಾರ ಕಂಡು ಕೊಂಡರು. ಅಲ್ಲದೇ ಈ ಒಪ್ಪಂದದಿಂದ ಮುಸ್ಲಿಮರು ಮತ್ತು ಮುಸ್ಲಿಮೇತರರು ಬಹಳಷ್ಟು ಸೌಹಾರ್ದ ಸಂಬಂಧವನ್ನು ಬೆಳೆಸಿ ಆ ಮೂಲಕ ಇಸ್ಲಾಮಿನ ಒಳಿತುಗಳನ್ನು ಅನುಭವದಿಂದ ತಿಳಿದು ಜನರು ಸಾಮೂಹಿಕವಾಗಿ ಇಸ್ಲಾಮಿಗೆ ಆಕರ್ಷಿತರಾಗುವ ಆಸ್ಪದ ದೊರೆಯಿತು. ಇದರಿಂದಾಗಿಯೇ ಪ್ರವಾದಿಯವರು(ಸ) ಆ ನಿಬಂಧನೆಗಳಿಗೆ ಒಪ್ಪಿದ್ದರೆಂದು ತಿಳಿಯಬಹುದು.

2. ಇಲ್ಲಿ ಇನ್ನೊಂದು ವಿಷಯವೂ ಗಮನಾರ್ಹ. ಈ ಒಪ್ಪಂದದಿಂದ ಪ್ರವಾದಿ ಯವರು(ಸ) ಇಸ್ಲಾಮಿ ತತ್ವಗಳಲ್ಲಿ ಯಾವುದಾದರೊಂದನ್ನು ಕೈಬಿಡಲು ಅಥವಾ ಯಾವುದಾದರೂ ಕಾರ್ಯಗಳಲ್ಲಿ ಕುರೈಶರೊಡನೆ ಸಹಕರಿಸುವುದಾಗಿಯೂ ಒಪ್ಪಿಲ್ಲ. ಪ್ರವಾದಿಯ(ಸ) ಸಂದೇಶ ಪ್ರಚಾರವು ಅರಣ್ಯರೋದನವೆಂದು ಜಗತ್ತು ಭಾವಿಸಿದ್ದ ಹಂತ ದಲ್ಲಿಯೂ ಕುರೈಶರು ಅಂತಹ ಬೇಡಿಕೆಗಳನ್ನಿಟ್ಟಾಗ ಪ್ರವಾದಿಯವರು(ಸ) ಅದನ್ನು ನಿರ್ಲಕ್ಷ್ಯದಿಂದ ತಳ್ಳಿ ಹಾಕಿದ್ದರು. ಇದು ಇತಿಹಾಸದಲ್ಲಿ ದಾಖಲಾಗಿರುವ ವಾಸ್ತವಿಕತೆಯಾಗಿದೆ. 'ಶಿರ್ಕ್'[1] ಮತ್ತು ತೌಹೀದ್[2]ಗಳು ಮಿಲನವಾಗಲು ಸಾಧ್ಯವಿದೆಯೇ? ಇಸ್ಲಾಮಿನ ಸಹಿಷ್ಣುತೆಗೆ ಅಂಥ ಯಾವ ಅರ್ಥವೂ ಇಲ್ಲ. ಅದು ಸಲ್ಲದೆಂಬುದು ಕುರ್‌ಆನಿನ ಘೋಷಣೆಯಾಗಿದೆ.

ಒಟ್ಟಿನಲ್ಲಿ ಈ ಒಪ್ಪಂದವನ್ನು ಇಸ್ಲಾಮೇತರ ವ್ಯವಸ್ಥೆಯ ಸ್ಥಾಪನೆಗಾಗಿ ಇಸ್ಲಾಮೇತರ ಆಂದೋಲನದವರೊಂದಿಗೆ ಮುಸ್ಲಿಮರು ಸಹಕರಿಸಿ ಕೆಲಸ ಮಾಡುವುದನ್ನು ಸಮರ್ಥಿಸು ವುದಕ್ಕಾಗಿ ಬಳಸುವಂತಿಲ್ಲ. ತೌಹೀದನ್ನು ತೊರೆದು ಶಿರ್ಕ್‌ಗಾಗಿ ಶ್ರಮಿಸುವೆವೆಂದು ಪ್ರವಾದಿ ಯವರು(ಸ) ಕುರೈಶರೊಡನೆ ಒಪ್ಪಂದ ಮಾಡಿದ ಚರಿತ್ರೆಯಿಲ್ಲ.

3. ಈ ಒಪ್ಪಂದದ ನಿಬಂಧನೆಗಳು ಕುರೈಶರಿಗೆ ಸ್ವಯಂ ತಿರುಗುಬಾಣವಾಗಿ- ಮುಸ್ಲಿಮರಿಗೆ ವರವಾಗಿ ಪರಿಣಮಿಸಿದ್ದನ್ನು ನಾವು ನೋಡಿದೆವು. ಪ್ರವಾದಿವರ್ಯರಿಗೆ(ಸ) ಈ ವಾಸ್ತವಿಕತೆ ಮೊದಲೇ ತಿಳಿದಿತ್ತೆಂದು ಭಾವಿಸಬಹುದು. ಆದರೆ, ಅತಿ ಉತ್ಸಾಹದ

1. ಅಲ್ಲಾಹನ ಹಕ್ಕು ಮತ್ತು ಅಧಿಕಾರಗಳಲ್ಲಿ ಸಹಭಾಗಿಗೊಳಿಸುವುದು.
2. ಅಲ್ಲಾಹನ ಎಲ್ಲ ಹಕ್ಕು ಮತ್ತು ಅಧಿಕಾರಗಳನ್ನು ಕೇವಲ ಆತನಿಗೆ ಬಿಟ್ಟು ಬಿಡುವುದು.

ಮುಸ್ಲಿಮರು ಈ ಒಪ್ಪಂದದಿಂದ ಉದ್ವಿಗ್ನರಾಗಿದ್ದರು. ಅವರು ಅದನ್ನು ತಮ್ಮ ದೌರ್ಬಲ್ಯ ಮತ್ತು ಹೇಡಿತನದ ಸಂಕೇತವೆಂದು ಪರಿಗಣಿಸಿದರು. ದೇವ ಪ್ರವಾದಿಯ(ಸ) ಅನುಸರಣೆ ಕಡ್ಡಾಯ ಕರ್ತವ್ಯವಾಗಿರುವುದರಿಂದ ಅವರು ತಮ್ಮ ದುಃಖವನ್ನು ಅದುಮಿಕೊಂಡರು. ಹಾಗಿದ್ದರೂ ಈ ಒಪ್ಪಂದವು ತಮಗೊಂದು ಅನುಗ್ರಹ ಮತ್ತು ವಿಜಯ ಪತಾಕೆಯೆಂದು ಅವರಿಗೆ ಶೀಘ್ರದಲ್ಲಿಯೇ ಮನವರಿಕೆಯಾಯಿತು.

4. ಅಬೂ ಬಶೀರ್(ರ) ಮತ್ತು ತಂಡದ ವರ್ತನೆಯು ಸ್ವಲ್ಪ ಮಿತಿಮೀರಿತೆಂದು ಕೆಲವರಿಗಾದರೂ ಭಾಸವಾಗಬಹುದು. ಆದರೆ ಕುರೈಶರ ಕ್ರೂರಕೃತ್ಯಗಳೊಂದಿಗೆ ತುಲನೆ ಮಾಡುವಾಗ ಅದು ತೀರಾ ಅಲ್ಪವೆನಿಸುತ್ತದೆ. ತಾವು ಸತ್ಯವೆಂದು ನಂಬಿದ ತತ್ವಸಿದ್ಧಾಂತವನ್ನು ಅವಲಂಬಿಸಿದ ಏಕೈಕ ಕಾರಣಕ್ಕಾಗಿ ಹುಟ್ಟಿ ಬೆಳೆದ ಮನೆಯನ್ನೂ ಊರನ್ನೂ ತೊರೆಯಲು ಕುರೈಶರು ಅವರನ್ನು ಬಲಾತ್ಕರಿಸಿದ್ದರು. ಮಾತ್ರವಲ್ಲ, ಅವರಿಗೆ ಆಶ್ರಯ ತಾಣವಾಗಿದ್ದ ಪ್ರವಾದಿಯವರ(ಸ) ಬಳಿಗೆ ಹೋಗದಂತೆ ತಡೆದರು. ಹೀಗಿರುತ್ತಾ ಅವರಿಗೆ ಬೇರೆ ಗತಿಯೇನಿದೆ! ಈ ದಾರುಣ ಪರಿಸ್ಥಿತಿಯಲ್ಲಿ ಅವರು ತಮ್ಮ ಆತ್ಮ ರಕ್ಷಣೆಗಾಗಿ, ಆತ್ಮಕ್ಕಿಂತ ಮಿಗಿಲಾದ ತಮ್ಮ ವಿಶ್ವಾಸಕ್ಕಾಗಿ ಅವರು ಎಲ್ಲಿಗೆ ಹೋಗಿ ಪಾರಾದರೂ ತಪ್ಪೇನಿದೆ! ಅದಕ್ಕೆ ಕುರೈಶರೇ ಸಂಪೂರ್ಣ ಹೊಣೆಗಾರರು. ವಸ್ತುತಃ ಕುರೈಶರು ತಮ್ಮ ವ್ಯಾಪಾರದ ಹಾದಿಯಲ್ಲಿ ವೈರಿ ತಂಡದ ಸುಶಕ್ತ ತಾಣವೊಂದನ್ನು ನಿರ್ಮಿಸುವ ಮೂಲಕ ಸ್ವಂತ ಹಾದಿಯಲ್ಲಿ ಮುಳ್ಳು ಹರಡಿಕೊಂಡರು.

+++

## ಅಂಜುಬುರುಕ ಹಿರ್ಕಲ್

ರೋಮನ್ ಚಕ್ರವರ್ತಿಯಾಗಿದ್ದ 'ಹಿರ್ಕಲ್' ಮತ್ತು ಆತನ ಅನುಯಾಯಿಗಳು ಜೆರೂಸಲೇಮಿನಲ್ಲಿದ್ದಾಗ 'ಅಬೂ ಸುಫ್‌ಯಾನ್'ರ ವ್ಯಾಪಾರಿ ತಂಡವು ಆ ದಾರಿಯಾಗಿ ಸಿರಿಯಾಕ್ಕೆ ಹೋಗುತ್ತಿತ್ತು. ಅದು ಅಬೂ ಸುಫ್‌ಯಾನ್‌ರೂ ಸೇರಿದಂತೆ ಖುರೈಶರೊಡನೆ ಪ್ರವಾದಿಯವರು(ಸ) ಮಾಡಿದ್ದ ಒಪ್ಪಂದವು (ಹುದೈಬಿಯಾ) ಜಾರಿಯಲ್ಲಿದ್ದ ಕಾಲವಾಗಿತ್ತು. ಅಬೂ ಸುಫ್‌ಯಾನ್ ಮತ್ತು ತಂಡವು ತನ್ನನ್ನು ಬಂದು ಭೇಟಿಯಾಗುವಂತೆ ಹಿರ್ಕಲ್ ಹೇಳಿ ಕಳುಹಿಸಿದನು. ಹಿರ್ಕಲ್‌ನ ಆಹ್ವಾನದಂತೆ ಅವರು ಅಲ್ಲಿಗೆ ಬಂದರು. ಆಗ ಅವರನ್ನು ಆದಷ್ಟು ಹತ್ತಿರ ಬರುವಂತೆ ಹಿರ್ಕಲ್ ವಿನಂತಿಸಿದನು. ಹಿರ್ಕಲ್‌ನ ಸುತ್ತಲೂ ರೋಮ್‌ನ ಪುರಪ್ರಮುಖರಿದ್ದರು.

ವ್ಯಾಪಾರಿ ತಂಡವು ಹತ್ತಿರ ಬಂದ ಬಳಿಕ, "ಪ್ರವಾದಿಯೆಂದು ವಾದಿಸುವ ಆ ವ್ಯಕ್ತಿಯೊಡನೆ ನಿಕಟ ಸಂಪರ್ಕವಿರುವವರು ನಿಮ್ಮಲ್ಲಿ ಯಾರಿದ್ದಾರೆ?" ಎಂದು ಹಿರ್ಕಲ್ ದ್ವಿಭಾಷಿಯ ಮೂಲಕ ಪ್ರಶ್ನಿಸಿದರು. "ನಾನೇ ಅವರ ಹತ್ತಿರದ ಬಂಧು" ಎಂದು ಅಬೂ ಸುಫ್‌ಯಾನ್ ಉತ್ತರಿಸಿದರು. "ಸರಿ, ಅವರನ್ನು ನನ್ನ ಬಳಿ ಕುಳ್ಳಿರಿಸಿರಿ; ಉಳಿದವರನ್ನು ಅವರ ಹಿಂದೆ ಕುಳ್ಳಿರಿಸಿರಿ." ಹಿರ್ಕಲ್ ತನ್ನ ಅಧಿಕಾರಿಗಳಿಗೆ ತಿಳಿಸಿದ.

"ಪ್ರವಾದಿಯೆಂದು ವಾದಿಸುವ ಆ ವ್ಯಕ್ತಿಯ ಕುರಿತು ನಾನು ಇವರೊಡನೆ ಕೆಲವು ವಿವರಗಳನ್ನು ಕೇಳುತ್ತೇನೆ. ಅವರು ನನ್ನೊಡನೆ ಸುಳ್ಳು ಹೇಳಿದರೆ ನೀವು ಅದು ಸುಳ್ಳೆಂದು ತಿಳಿಸಬೇಕು" ಎಂಬುದಾಗಿ ವ್ಯಾಪಾರಿ ತಂಡದ ಇತರರೊಡನೆ ದ್ವಿಭಾಷಿಯ ಮೂಲಕ ಅವರು ವಿನಂತಿಸಿದರು.[1] ತರುವಾಯ ಹಿರ್ಕಲ್, ಅಬೂ ಸುಫ್‌ಯಾನ್‌ರೊಡನೆ ಪ್ರಶ್ನಿಸಲಾರಂಭಿಸಿದರು-

**ಹಿರ್ಕಲ್:** ಅವರ ಕುಲ ಮಹಿಮೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ಅಬೂ ಸುಫ್‌ಯಾನ್:** ನಮ್ಮ ಪೈಕಿ ಅವರು ಉನ್ನತ ಕುಲದವರಾಗಿದ್ದಾರೆ.

**ಹಿರ್ಕಲ್:** ಇಂತಹ ವಾದವನ್ನು ಈ ಹಿಂದೆ ನಿಮ್ಮಲ್ಲಿ ಯಾರಾದರೂ ಎಂದಾದರೂ ಹೂಡಿದ್ದರೆ?

1. ಇತರರು ತನ್ನನ್ನು ಅಲ್ಲಗಳೆಯ ಬಹುದೆಂಬ ಭೀತಿಯಿಲ್ಲದಿರುತ್ತಿದ್ದರೆ 'ಅಬೂ ಸುಫ್‌ಯಾನ್' ಅವರೊಡನೆ ಸುಳ್ಳು ಹೇಳುತ್ತಿದ್ದರು.

ಅಬೂ ಸುಫ್‌ಯಾನ್: ಇಲ್ಲ.

ಹಿರ್ಕಲ್: ಅವರ ಪೂರ್ವಜರಲ್ಲಿ ಯಾರಾದರೂ ರಾಜಂದಿರಿದ್ದರೇ?

ಅಬೂ ಸುಫ್‌ಯಾನ್: ಇಲ್ಲ.

ಹಿರ್ಕಲ್: ಅವರನ್ನು ಹೆಚ್ಚಾಗಿ ಬೆಂಬಲಿಸುವವರು ಶ್ರೀಮಂತರೋ ಬಡವರೋ?

ಅಬೂ ಸುಫ್‌ಯಾನ್: ಬಡವರು.

ಹಿರ್ಕಲ್: ಅವರಿಗೆ ಅನುಯಾಯಿಗಳು ಹೆಚ್ಚುತ್ತಿದ್ದಾರೋ ಕಡಿಮೆಯಾಗುತ್ತಿದ್ದಾರೋ?

ಅಬೂ ಸುಫ್‌ಯಾನ್: ಹೆಚ್ಚುತ್ತಿದ್ದಾರೆ.

ಹಿರ್ಕಲ್: ಅವರ ಧರ್ಮದಲ್ಲಿ (ಜೀವನ ವ್ಯವಸ್ಥೆ) ಸೇರಿದ ಬಳಿಕ ಯಾರಾದರೂ ಅಸಂತೃಪ್ತಿಯಿಂದ ತಮ್ಮ ಧರ್ಮಕ್ಕೆ ಮರಳಿದ್ದಾರೆಯೇ?

ಅಬೂ ಸುಫ್‌ಯಾನ್: ಇಲ್ಲ.

ಹಿರ್ಕಲ್: ಅವರು ಒಪ್ಪಂದ ಮುರಿಯುತ್ತಾರೆಯೇ?

ಅಬೂ ಸುಫ್‌ಯಾನ್: ಇಲ್ಲ, ಆದರೆ ಈಗ ನಮ್ಮ ನಡುವೆ ಒಂದು ಒಪ್ಪಂದ ಜಾರಿಯಲ್ಲಿದೆ. ಅದರಲ್ಲಿ ಅವರು ಏನು ಮಾಡುವರೋ ತಿಳಿದಿಲ್ಲ.[2]

ಹಿರ್ಕಲ್: ನಿಮ್ಮ ನಡುವೆ ಯುದ್ಧ ನಡೆದಿದೆಯೇ?

ಅಬೂ ಸುಫ್‌ಯಾನ್: ನಡೆದಿದೆ.

ಹಿರ್ಕಲ್: ಅದು ಹೇಗೆ ಕೊನೆಗೊಂಡಿತ್ತು?

ಅಬೂ ಸುಫ್‌ಯಾನ್: ಕೆಲವೊಮ್ಮೆ ನಾವು ಜಯಿಸುತ್ತಿದ್ದೆವು, ಕೆಲವೊಮ್ಮೆ ಅವರು ಜಯಿಸುತ್ತಿದ್ದರು.

ಹಿರ್ಕಲ್: ಅವರು ಯಾವ ಆದೇಶಗಳನ್ನು ನೀಡುತ್ತಿದ್ದಾರೆ?

ಅಬೂ ಸುಫ್‌ಯಾನ್: ಕೇವಲ ಅಲ್ಲಾಹನನ್ನು ಆರಾಧಿಸಬೇಕು, ಆತನೊಡನೆ ಯಾರನ್ನೂ ಸಹಭಾಗಿಗೊಳಿಸಬಾರದು. ಪೂರ್ವಜರ ಸಂಪ್ರದಾಯಗಳನ್ನು ತೊರೆಯಬೇಕು, ನಮಾಝ್ ಮಾಡಬೇಕು, ಸತ್ಯ ನುಡಿಯಬೇಕು, ನಿಷಿದ್ಧ ಕಾರ್ಯಗಳನ್ನು ಮಾಡಬಾರದು, ಕುಟುಂಬ ಸಂಬಂಧವನ್ನು ಬಲಪಡಿಸಬೇಕು ಎಂದು ಮುಂತಾಗಿ ಆದೇಶಿಸುತ್ತಿದ್ದಾರೆ.

ಹಿರ್ಕಲ್: ನಾನು ನಿಮ್ಮೊಡನೆ ಅವರ ಕುಲ ಮಹಿಮೆಯ ಬಗ್ಗೆ ಕೇಳಿದೆ, ಅವರು ನಿಮ್ಮ ಪೈಕಿ ಉನ್ನತ ಕುಲದವರೆಂದು ನೀವು ಉತ್ತರಿಸಿದಿರಿ. ಪ್ರವಾದಿಗಳನ್ನು ಸಾಮಾನ್ಯವಾಗಿ ಉನ್ನತ ಕುಲದಿಂದಲೇ ನೇಮಿಸಲಾಗುತ್ತದೆ. ಅವರಿಗಿಂತ ಮುಂಚೆ ಯಾರಾದರೂ ಹೀಗೆ

2. ಅಬೂ ಸುಫ್‌ಯಾನ್‌ಗೆ ಈ ಒಂದು 'ಅಪಸ್ವರ'ವಲ್ಲದೆ ಬೇರೆ ಏನನ್ನೂ ಸೇರಿಸಲಾಗಲಿಲ್ಲ.

ವಾದಿಸಿದ್ದರೇ ಎಂದು ನಾನು ಪ್ರಶ್ನಿಸಿದೆ. ನೀವು 'ಇಲ್ಲ'ವೆಂದು ಹೇಳಿದಿರಿ, ವಾದಿಸಿರುತ್ತಿದ್ದರೆ ಅವರು ತಮ್ಮ ಹಿಂದಿನವರನ್ನು ಅನುಕರಿಸಿದ್ದೆಂದು ಭಾವಿಸಬಹುದಾಗಿತ್ತು. ಅವರ ಪೂರ್ವಜರಲ್ಲಿ ಯಾರಾದರೂ ರಾಜರಾಗಿದ್ದರೇ ಎಂದು ನಾನು ನಿಮ್ಮೊಡನೆ ವಿಚಾರಿಸಿದೆ. ನೀವು 'ಇಲ್ಲ'ವೆಂದು ಉತ್ತರಿಸಿದಿರಿ. ಇರುತ್ತಿದ್ದರೆ ಕಳೆದು ಕೊಂಡ ತಮ್ಮ ಪೂರ್ವಜರ ಆಧಿಪತ್ಯವನ್ನು ಪ್ರವಾದಿತ್ವ ವಾದದ ಕುತಂತ್ರದಿಂದ ಮರಳಿ ಗಳಿಸಲು ಅವರು ಪ್ರಯತ್ನಿಸುತ್ತಿರುವರೆಂದು ಭಾವಿಸಬಹುದಾಗಿತ್ತು. ಈ ವಾದವನ್ನು ಆರಂಭಿಸುವುದಕ್ಕಿಂತ ಮುಂಚೆ ಎಂದಾದರೂ ಸುಳ್ಳು ಹೇಳುತ್ತಿದ್ದರೇ ಎಂಬ ಪ್ರಶ್ನೆಗೆ ನೀವು 'ಇಲ್ಲ'ವೆಂದು ತಿಳಿಸಿದಿರಿ. ಮಾನವರ ಬಗ್ಗೆ ಸುಳ್ಳು ಹೇಳದವರು ಅಲ್ಲಾಹನ ಬಗ್ಗೆ ಸುಳ್ಳು ಹೇಳುವುದು ಅಸಂಭವನೀಯವೆಂದು ನಾನು ಭಾವಿಸುತ್ತೇನೆ. ಅವರನ್ನು ಹೆಚ್ಚಾಗಿ ಬೆಂಬಲಿಸುವವರು ಪ್ರಮುಖರೋ ದುರ್ಬಲರೋ ಎಂದು ಕೇಳಿದಕ್ಕೆ ನೀವು ದುರ್ಬಲರೆಂದು ತಿಳಿಸಿದಿರಿ. ಸಾಮಾನ್ಯವಾಗಿ ಪ್ರವಾದಿಗಳನ್ನು ಬಡವರೇ ಹೆಚ್ಚಾಗಿ ಅನುಗಮಿಸುತ್ತಾರೆ. ಅವರ ಸಂಖ್ಯೆ ಹೆಚ್ಚುತ್ತಿದೆಯೇ ಕಡಿಮೆಯಾಗುತ್ತಿದೆಯೇ ಎಂಬ ಪ್ರಶ್ನೆಗೆ ಹೆಚ್ಚುತ್ತಿದೆಯೆಂದು ಉತ್ತರಿಸಿದಿರಿ. ಬೆಳವಣಿಗೆ ಪೂರ್ಣವಾಗುವ ತನಕ ಸತ್ಯವಿಶ್ವಾಸದ ಸ್ಥಿತಿ ಅದೇ ಆಗಿದೆ. ಅವರ ಧರ್ಮಕ್ಕೆ ಸೇರಿದ ಬಳಿಕ ಯಾರಾದರೂ ಅಸಂತೃಪ್ತಿಯಿಂದ ಮರಳುತ್ತಿರುವರೇ ಎಂದು ಪ್ರಶ್ನಿಸಿದ್ದಕ್ಕೆ 'ಇಲ್ಲ'ವೆಂದು ನೀವು ಉತ್ತರಿಸಿದಿರಿ. ಅದು ಸತ್ಯವಿಶ್ವಾಸದ ಸ್ವಭಾವವಾಗಿದೆ. ಅದು ಒಮ್ಮೆ ಹೃದಯದಲ್ಲಿ ಬೇರು ಬಿಟ್ಟ ಬಳಿಕ ಕಿತ್ತು ಹೋಗುವುದಿಲ್ಲ. ಅವರು ಒಪ್ಪಂದ ಉಲ್ಲಂಘಿಸುತ್ತಾರೋ ಎಂದು ಕೇಳಿದಾಗ ನೀವು 'ಇಲ್ಲ' ಎಂದಿರಿ. ಪ್ರವಾದಿಗಳು ಹಾಗೆಯೇ, ಅವರು ಒಪ್ಪಂದವನ್ನು ಉಲ್ಲಂಘಿಸುವುದಿಲ್ಲ. ಅವರ ಆದೇಶಗಳೇನು? ಎಂದು ವಿಚಾರಿಸಿದಾಗ, ಕೇವಲ ಅಲ್ಲಾಹನನ್ನು ಆರಾಧಿಸಬೇಕು, ಆತನೊಡನೆ ಯಾರನ್ನು ಸಹಭಾಗಿ ಗೊಳಿಸ ಬಾರದು, ವಿಗ್ರಹಾರಾಧನೆಯನ್ನು ಮಾಡಬಾರದು, ನಮಾಝ್ ನಿರ್ವಹಿಸಬೇಕು, ಸತ್ಯ ಹೇಳಬೇಕು, ನಿಷಿದ್ಧ ಕಾರ್ಯಗಳಿಂದ ದೂರವಿರಬೇಕೆಂದು ಆದೇಶಿಸುತ್ತಿರುವುದಾಗಿ ನೀವು ಉತ್ತರಿಸಿದಿರಿ.

'ನೀವು ಹೇಳಿದ್ದೆಲ್ಲವೂ ಸತ್ಯವೆಂದಾದರೆ ನನ್ನ ಪಾದಗಳು ಭದ್ರವಾಗಿ ನೆಲೆಯೂರಿರುವ ಈ ನೆಲವು ಶೀಘ್ರ ಭವಿಷ್ಯದಲ್ಲಿ ಅವರ ಸ್ವಾಧೀನವಾಗಲಿದೆ. ಅವರು ಆಗಮಿಸುವ ವೇಳೆ ಹತ್ತಿರವಾಗಿದೆಯೆಂದು ನಾನು ಭಾವಿಸಿದ್ದೆ. ಆದರೆ, ಅವರು ನಿಮ್ಮ ಕಡೆಯಲ್ಲಿ ಬರಬಹುದೆಂದು ನಾನು ಗ್ರಹಿಸಿರಲಿಲ್ಲ.'[1] ಅವರನ್ನು ತಲುಪ ಬಹುದೆಂದು ನನಗೆ ಖಾತ್ರಿಯಾದರೆ ನಾನು ಅವರನ್ನು ಭೇಟಿಯಾಗದಿರಲಾರೆ. ನಾನು ಅವರ ಬಳಿಯಿರುತ್ತಿದ್ದರೆ ಅವರ ಎರಡು ಪಾದಗಳನ್ನೂ ತೊಳೆಯುತ್ತಿದ್ದೆ."[2] (ಅವರ ಉಪಚಾರ ಮಾಡುತ್ತಿದ್ದೆ)

1. ಅಂತ್ಯ ಪ್ರವಾದಿಯು ಬನೀ ಇಸ್ರಾಈಲರಲ್ಲಿ ಬರಬಹುದೆಂದು ಯಹೂದಿಯರು ಮತ್ತು ಕ್ರೈಸ್ತರು ಭಾವಿಸಿದ್ದರು.

2. ಹೋಗಲು ಪ್ರಯತ್ನಿಸಿದರೆ ಅರ್ಧ ದಾರಿಯಲ್ಲಿಯೇ ಯಾರಾದರೂ ವಧಿಸಬಹುದೆಂದು ಹಿರ್ಕಲ್ ಹೆದರಿದ್ದರು.

ತರುವಾಯ ಹಿರ್ಕಲ್ ಪ್ರವಾದಿಯವರ(ಸ) ಕಾಗದವನ್ನು, ತರಿಸಿದರು. ಪ್ರವಾದಿಯವರು(ಸ) ಈ ಪತ್ರವನ್ನು ಹಿಜರಿ 6ನೆಯ ವರ್ಷದಲ್ಲಿ 'ಬುಸ್ರಾ'ದ ಆಡಳಿತಗಾರನಿಗೆ ದಿಹ್‌ಯಾ ಕಲ್ಬಿಯವರ(ರ) ಮೂಲಕ ಕಳುಹಿಸಿದ್ದರು. ಬುಸ್ರಾದ ಆಡಳಿತಗಾರನು ಅದನ್ನು ಹಿರ್ಕಲ್‌ಗೆ ತಲಪಿಸಿದರು. ಹಿರ್ಕಲ್ ಅದನ್ನು ಓದಿದರು. ಅದರಲ್ಲಿ ಹೀಗೆ ಬರೆಯಲಾಗಿತ್ತು:

"ಪರಮ ದಯಾಳುವೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ. ಅಲ್ಲಾಹನ ದಾಸ ಮತ್ತು ಸಂದೇಶವಾಹಕನಾದ ಮುಹಮ್ಮದ್, ರೋಮನ್ ಚಕ್ರವರ್ತಿ ಹಿರ್ಕಲ್‌ರಿಗೆ ಬರೆದು ತಿಳಿಸುವುದೇನೆಂದರೆ, ಸನ್ಮಾರ್ಗವನ್ನು ಅನುಗಮಿಸಿದವರಿಗೆ ಮೋಕ್ಷವಿದೆ-

ಆದ್ದರಿಂದ ನಾನು ನಿಮ್ಮನ್ನು ಇಸ್ಲಾಮಿನ ಮೂಲ ವಚನದತ್ತ (ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ, ಮುಹಮ್ಮದ್(ಸ) ಆತನ ಪ್ರವಾದಿ) ಆಹ್ವಾನಿಸುತ್ತಿದ್ದೇನೆ. ಇದನ್ನು ಅಂಗೀಕರಿಸಿದರೆ ನೀವು ರಕ್ಷಣೆ ಹೊಂದುವಿರಿ. ಅಲ್ಲಾಹನು ನಿಮಗೆ ಇಮ್ಮಡಿ ಪ್ರತಿಫಲವನ್ನು ನೀಡುವನು. ನೀವು ವಿಮುಖರಾದರೆ ನಿಮ್ಮ ಸ್ವಂತ ಪಾಪದ ಜೊತೆಗೆ ನಿಮ್ಮ ಪ್ರಜೆಗಳ ಪಾಪವನ್ನೂ ನೀವು ಹೊರಬೇಕಾದೀತು.

ಗ್ರಂಥದವರೇ! ಅಲ್ಲಾಹನ ಹೊರತು ಅನ್ಯರ ದಾಸ್ಯ-ಆರಾಧನೆ ಮಾಡಬಾರದು, ಆತನೊಡನೆ ಯಾರನ್ನೂ ಸಹಭಾಗಿಗೊಳಿಸಬಾರದು, ಅಲ್ಲಾಹನ ಹೊರತು ಇತರ ಯಾರನ್ನೂ ನಾವು ರಬ್ಬ್(ಪ್ರಭು)ಗಳಾಗಿ ಸ್ವೀಕರಿಸಬಾರದು ಎಂಬ ನಾವಿಬ್ಬರೂ ಸಮಾನವಾಗಿ ಕಾಣುವ ತತ್ವದೆಡೆಗೆ ನೀವು ಬನ್ನಿರಿ. ಅವರು (ಗ್ರಂಥದವರು) ಹಿಂಜರಿದರೆ 'ನಾವು (ಅಲ್ಲಾಹನನ್ನು) ಅನುಸರಿಸಿದವರೆಂದು ನೀವು ಸಾಕ್ಷ್ಯ ವಹಿಸಿರೆಂದು (ಮುಸ್ಲಿಮರೇ!) ನೀವು ಅವರೊಡನೆ ಹೇಳಿರಿ."

'ಹಿರ್ಕಲ್', ಹೇಳುವುದನ್ನೆಲ್ಲಾ ಹೇಳಿ ಪತ್ರ ಓದಿ ಮುಗಿಸಿದ ಬಳಿಕ ಅಲ್ಲಿ ಭಾರೀ ಗಲಾಟೆಯಾಯಿತು. ನಾನಾ ರೀತಿಯ ಅಪಸ್ವರಗಳು ಮೊಳಗಿದುವು. ಹೇಗಾದರೂ 'ಅಬೂ ಸುಫ್‌ಯಾನ್'ರ ತಂಡವನ್ನು ಹೊರಗೆ ಕಳುಹಿಸಲಾಯಿತು. "ಅಬೂ ಕಬ್‌ಶ[1]ನ ಪುತ್ರನ ಸ್ಥಾನ ಉನ್ನತವಾಗಿ ಬಿಟ್ಟಿತು; ರೋಮನ್ ಚಕ್ರವರ್ತಿಯೂ[2] ಆತನಿಗೆ ಹೆದರಲಾರಂಭಿಸಿದ್ದಾರೆ" ಎಂದು 'ಅಬೂ ಸುಫ್‌ಯಾನ್' ತನ್ನ ಸಂಗಡಿಗರಿಗೆ ಹೇಳಿದರು.[3]

1. ಪ್ರವಾದಿಯವರಿಗೆ(ಸ) ಮೊಲೆಹಾಲು ನೀಡಿದ 'ಹಲೀಮಾ'ರ ಪತಿ. ಪ್ರವಾದಿಯವರನ್ನು ನಿಂದಿಸುವ ಉದ್ದೇಶದಿಂದ ವೈರಿಗಳು ಅವರನ್ನು ಅಬೂ ಕಬ್‌ಶ್‌ನ ಮಗನೇ ಎಂದು ಕರೆಯುತ್ತಿದ್ದರು.

2. ಮೂಲದಲ್ಲಿ 'ಹಳದಿ ವರ್ಗದವರ ರಾಜ' ಎಂದು ಪ್ರಯೋಗಿಸಲಾಗಿದೆ. ರೋಮನರ ಓರ್ವ ಪೂರ್ವಜನಿಗೆ 'ಅಬಿಸೀನಿಯ' ರಾಜರಲ್ಲಿ ಹುಟ್ಟಿದ ಮಕ್ಕಳು ಹಳದಿ ಬಣ್ಣದವರಾಗಿದ್ದುದರಿಂದ ರೋಮನರಿಗೆ 'ಹಳದಿ ವರ್ಗದವರು' ಎಂಬ ಹೆಸರು ಬಂತು.

3. ಆ ದಿನದಿಂದ ಇಸ್ಲಾಮ್ ಸ್ವೀಕರಿಸುವ ತನಕ ಅಬೂ ಸುಫ್‌ಯಾನ್‌ರ ಮನಸ್ಸು, ಪ್ರವಾದಿಯವರು(ಸ) ವಿಜಯ ಸಾಧಿಸುವರೆಂದು ಹೇಳುತ್ತಿತ್ತು.

ಹಿರ್ಕಲ್ ಜ್ಯೋತಿಶಾಸ್ತ್ರ ಪ್ರವೀಣರಾಗಿದ್ದರು. ಅವರು 'ಜೆರೂಸಲೇಮ್' ನಲ್ಲಿದ್ದಾಗ ಒಂದು ಬೆಳಗಾತ ಬಹಳ ದುಃಖಿತರಾಗಿರುವಂತೆ ತೋರಿತು. ಅದರ ಕಾರಣ ತಿಳಿಯದೆ ಹಿರ್ಕಲ್‌ನ ಸೇನಾ ನಾಯಕರು ಅವರೊಡನೆ, "ನೀವು ಬಹಳ ಶೋಕ ತಪ್ತರಾಗಿರುವಂತೆ ಭಾಸವಾಗುತ್ತಿದೆ. ಅದಕ್ಕೆ ಕಾರಣವೇನು?" ಎಂದು ವಿಚಾರಿಸಿದರು. "ನಾನು ನಿನ್ನೆ ನಕ್ಷತ್ರ ವೀಕ್ಷಣೆ ನಡೆಸುತ್ತಿದ್ದಾಗ ಮುಂಜಿ ಮಾಡಿದವರ ದೊರೆಯು ಜಯ ಸಾಧಿಸಿರುವುದಾಗಿ ಮನಗಂಡೆ. ಈ ಸಮುದಾಯದಲ್ಲಿ ಮುಂಜಿ ಕರ್ಮ ಮಾಡುವವರಾರು?" ಎಂದು ಹಿರ್ಕಲ್ ಕೇಳಿದರು. "ಯಹೂದಿಯರ ಹೊರತು ಬೇರೆ ಯಾರೂ ಮುಂಜಿ ಮಾಡಿಸು ವುದಿಲ್ಲ. ಅವರ ಬಗ್ಗೆ ನೀವು ಯಾಕೆ ದುಃಖಿಸುತ್ತೀರಿ. ನಿಮ್ಮ ಅಧಿಕಾರ ಸೀಮೆಯಲ್ಲಿರುವ ಎಲ್ಲ ಆಡಳಿತಗಾರರಿಗೂ ಆಜ್ಞೆ ಕಳಿಸಿರಿ; ಅವರು ತಂತಮ್ಮ ಪ್ರದೇಶದಲ್ಲಿರುವ ಎಲ್ಲ ಯಹೂದಿಯರನ್ನು ಕೊಂದು ಹಾಕಲಿ!" ಎಂದು ಅವರು ಸಮಾಧಾನ ಪಡಿಸಿದರು.

ಈ ಕುರಿತು ಅವರು ಸಂಭಾಷಣೆ ನಡೆಸುತ್ತಿದ್ದರು. ಆಗ ಹಿರ್ಕಲ್‌ನ ಬಳಿಗೆ ಓರ್ವ ದೂತ ಬಂದನು. ಪ್ರವಾದಿಯವರ(ಸ) ಸುದ್ದಿ ತಿಳಿಸಲಿಕ್ಕಾಗಿ 'ಗಸ್ಸಾನ್' ರಾಜನು ಆತನನ್ನು ಕಳುಹಿಸಿದ್ದನು. ಹಿರ್ಕಲ್ ಆತನಿಂದ ಪ್ರವಾದಿಯವರ(ಸ) ವಿವರಗಳನ್ನು ತಿಳಿದುಕೊಂಡರು. ತರುವಾಯ ತನ್ನ ಅಧಿಕಾರಿಗಳಿಗೆ, "ಆತನು ಮುಂಜಿ ಮಾಡಿಸಿರುವನೋ ಎಂದು ಪರೀಕ್ಷಿಸಿರಿ" ಎಂದು ಆದೇಶಿಸಿದರು. ಹಾಗೆಯೇ ಅವನನ್ನು ಪರೀಕ್ಷಿಸಿದ ಬಳಿಕ ಆತನು ಮುಂಜಿ ಮಾಡಿಸಿರುವನೆಂದು ಹಿರ್ಕಲ್‌ರಿಗೆ ತಿಳಿಸಿದರು. ಆಗ ಹಿರ್ಕಲ್ ಆತನೊಡನೆ, "ಅರಬರು ಮುಂಜಿ ಮಾಡಿಸುತ್ತಾರೆಯೇ?" ಎಂದು ಪ್ರಶ್ನಿಸಿದರು. 'ಹೌದೆಂದು' ಆತ ಉತ್ತರಿಸಿದ. ಆಗ ಹಿರ್ಕಲ್ ಹೀಗೆಂದರು: "ಇನ್ನು ಮುಂದೆ ಅವರೇ ಈ ಎಲ್ಲ ಜನತೆಯ ನಾಯಕರು. ಅವರು ವಿಜೇತರಾದರು." ಆ ಬಳಿಕ ಅವರು ರೋಮ್ ನಗರದಲ್ಲಿರುವ ಓರ್ವ ಮಿತ್ರನಿಗೆ ಈ ಕುರಿತು ಪತ್ರ ಕಳುಹಿಸಿದರು. ಅವರು ಪಾಂಡಿತ್ಯದಲ್ಲಿ ಹಿರ್ಕಲ್‌ರಿಗೆ ಸಮಾನರಾಗಿದ್ದರು. ಆ ಬಳಿಕ ಶೀಘ್ರವೇ ಅವರು 'ಹಿಮ್ಮ್ಸ್'ಗೆ ಹೋದರು.

ಹಿರ್ಕಲ್ ಹಿಮ್ಮ್ಸ್‌ಗೆ ತಲಪಿದ ಕೂಡಲೇ ಮಿತ್ರನ ಉತ್ತರ ಬಂತು. ಪ್ರವಾದಿ ವರ್ಯರ(ಸ) ಆಗಮನದ ಕುರಿತು, ಅವರು ಪ್ರವಾದಿಯೆಂದು ಹಿರ್ಕಲ್‌ನಂತೆಯೇ ಆ ಮಿತ್ರನಿಗೂ ಅಭಿಪ್ರಾಯವಿತ್ತು. ಅನಂತರ ಹಿರ್ಕಲ್, ರೋಮನ್ ಸಾಮ್ರಾಜ್ಯದ ಎಲ್ಲ ಪುರಪ್ರಮುಖರನ್ನು ಕರೆಸಿ 'ಹಿಮ್ಮ್ಸ್'ನ ಒಂದು ಕೋಟೆಯಲ್ಲಿ ಸಭೆ ಸೇರಿಸಿದರು. ಎಲ್ಲರೂ ತಲಪಿದ ಬಳಿಕ ಕೋಟೆಯ ಒಳಭಾಗಕ್ಕೆ ಬರುವ ಎಲ್ಲ ಬಾಗಿಲುಗಳನ್ನು ಮುಚ್ಚುವಂತೆ ಅವರು ಸೇವಕರಿಗೆ ಆದೇಶಿಸಿದರು. ಆ ಪ್ರಕಾರ ಎಲ್ಲ ಬಾಗಿಲುಗಳನ್ನು ಮುಚ್ಚಲಾಯಿತು. ಈಗ ಜನರು ಕೋಟೆಯ ಅಂಗಣದಲ್ಲಿಯೂ ಹಿರ್ಕಲ್ ಕೋಟೆಯ ಒಳಭಾಗದಲ್ಲಿಯೂ ಉಳಿದರು. ಎಲ್ಲವೂ ಸುರಕ್ಷಿತವಾಗಿದೆಯೆಂದು ಮನಗಂಡ ಬಳಿಕ ಅವರು ಕೋಟೆಯ ಮೇಲ್ಭಾಗದಲ್ಲಿ ಬಂದು ನಿಂತು ಹೀಗೆ ಹೇಳಿದರು: "ರೋಮನರೇ

ನೀವು ನಿಮ್ಮ ಯಶಸ್ಸು ಮತ್ತು ರಾಜಾಡಳಿತದ ಭದ್ರತೆಯನ್ನು ಬಯಸುವುದಿದ್ದರೆ ಈ ಪ್ರವಾದಿಯ ಕೈಯಲ್ಲಿ ಬೈಅತ್[1] ಮಾಡಿರಿ."

ಹಿರ್ಕಲ್‌ರ ಮಾತು ಪೂರ್ಣವಾಗುವುದಕ್ಕಿಂತ ಮುಂಚೆಯೇ ಜನರು ರಣಹದ್ದು ಗಳಂತೆ ಕೋಟೆಯ ಪ್ರವೇಶ ದ್ವಾರಗಳ ಬಳಿಗೆ ಧಾವಿಸಿದರು. ಆದರೆ ಕೋಟೆಯ ಬಾಗಿಲು ಗಳನ್ನು ಮುಚ್ಚಲಾಗಿತ್ತಲ್ಲವೇ. ಜನರ ಈ ಕ್ರೋಧಾವೇಶವನ್ನು ಕಂಡು ಅವರಿಗೆ ಇಸ್ಲಾಮ್ ಸ್ವೀಕರಿಸುವ ಕುರಿತು ಬಾರೀ ಸಿಟ್ಟಿದೆಯೆಂದು ಅವರು ಗ್ರಹಿಸಿದರು. ಈ ಪ್ರತಿಕ್ರಿಯೆಯಿಂದ ಅವರು ನಿರಾಶರಾದರು. ತಕ್ಷಣವೇ ಅವರು ಒಂದು ತಂತ್ರ ಹೂಡಲು ನಿರ್ಧರಿಸಿದರು.[2] ಕುಪಿತರಾದ ತಮ್ಮ ಪ್ರಜೆಗಳನ್ನು ಪುನಃ ತನ್ನ ಮುಂದೆ ಬಂದು ನಿಲ್ಲುವಂತೆ ಆಜ್ಞಾಪಿಸಿದರು. ಎಲ್ಲರೂ ಬಂದ ಬಳಿಕ, "ನಮ್ಮ ಧರ್ಮದ ಬಗ್ಗೆ ನಿಮಗಿರುವ ವಿಶ್ವಾಸದ ದೃಢತೆಯನ್ನು ಪರೀಕ್ಷಿಸಲಿಕ್ಕಾಗಿ ನಾನು ಹೀಗೆ ಮಾತಾಡಿದೆ; ಈಗ ಅದು ನನಗೆ ಖಚಿತವಾಯಿತು" ಎಂದು ಜನರನ್ನು ಸಮಾಧಾನಪಡಿಸಿದರು. ತಕ್ಷಣ ಅವರೆಲ್ಲರೂ ಮೊಣಕಾಲೂರಿ ವಂದಿಸಿ ತಮ್ಮ ಸಂತೃಪ್ತಿ ವ್ಯಕ್ತಪಡಿಸಿದರು. ಹೇಡಿಯಾಗಿದ್ದ ಹಿರ್ಕಲ್ ತನ್ನ ಜೀವನಾಂತ್ಯದ ತನಕ ಸತ್ಯವಿಶ್ವಾಸವನ್ನು ಅಡಗಿಸುವ ಈ ತಂತ್ರವನ್ನೇ ಅನುಸರಿಸಿದರು.[3] (ಬುಖಾರಿ)

**ಟಿಪ್ಪಣಿಗಳು:**

1. ಬುದ್ಧಿಯ ಹಿನ್ನೆಲೆಯಲ್ಲಿ ಪ್ರವಾದಿಯವರ(ಸ) ರಾಯಭಾರವನ್ನು ದೃಢೀಕರಿಸುವ ಪ್ರಬಲ ಆಧಾರಗಳು ಈ ಐತಿಹಾಸಿಕ ಘಟನೆಯಿಂದ ನಮಗೆ ತಿಳಿಯುತ್ತದೆ.

2. ತಾವು ಗಳಿಸಿದ ಉನ್ನತ ಸ್ಥಾನಕ್ಕೆ ಚ್ಯುತಿಯಾದೀತೆಂದು ಮನಗಂಡಾಗ ಅಧಮರು ಆತ್ಮಸಾಕ್ಷಿಯನ್ನು ವಂಚಿಸಿ ಹೇಗೆ ಬೇಕಾದರೂ ವರ್ತಿಸಲು ಸಿದ್ಧರಾಗುವರೆಂದು ಈ ಹೇಡಿ ಚಕ್ರವರ್ತಿಯ ನಾಟಕೀಯ ವರ್ತನೆಯಿಂದ ವ್ಯಕ್ತವಾಗುತ್ತದೆ.

3. ಅಗತ್ಯ ಬಿದ್ದಾಗ ಪ್ರಾಣ ತ್ಯಾಗಕ್ಕೂ ಸಿದ್ಧರಿರುವವರಿಗೆ ಮಾತ್ರ ಸತ್ಯವಿಶ್ವಾಸದ ಮಾಧುರ್ಯ ಸವಿಯಲು ಸಾಧ್ಯವೆಂದು 'ಹಿರ್ಕಲ್' ನಮಗೆ ಕಲಿಸಿದ್ದಾರೆ.

4. ಸತ್ಯವಿಶ್ವಾಸ ಹೃದಯದಲ್ಲಿ ಅಡಗಿಸಲಿಕ್ಕಾಗಿರುವುದಲ್ಲ. ಬದಲಾಗಿ ಅದು ಮಾತು ಕೃತಿಗಳಿಂದ ಬಹಿರಂಗವಾಗಬೇಕು. ವಿಶೇಷತಃ ಜನನಾಯಕರಲ್ಲಿ, ಪ್ರಾಯಶಃ ಆ ಕಾರಣ ದಿಂದಲೇ ಹಿರ್ಕಲ್‌ರು ನಾನು ಮುಸ್ಲಿಮನೆಂದು ಸ್ವಯಂ ಸ್ಪಷ್ಟಪಡಿಸಿದರೂ ಪ್ರವಾದಿ ಯವರು(ಸ) ಅಂಗೀಕರಿಸಲಿಲ್ಲ. ಸೂಕ್ಷ್ಮವಾಗಿ ಪರಿಶೀಲಿಸಿದರೆ ಇಂದು ಅನೇಕ ಆಧುನಿಕ ಹಿರ್ಕಲರು ಇದೇ ನೀತಿಯನ್ನು ಬೆಳೆಸಿಕೊಂಡಿರುವುದನ್ನು ಕಾಣಬಹುದು.

+++

1. ಪ್ರವಾದಿಯವರ ಆದೇಶದನ್ವಯ ಬಾಳುವವೆಂಬ ಪ್ರತಿಜ್ಞೆ.

2. ಪ್ರಾಯಶಃ ತನ್ನ ಕೊಲೆಯಾಗಬಹುದೆಂದು ಹಿರ್ಕಲ್ ಹೆದರಿದ್ದರು.

3. ತಾನು ಮುಸ್ಲಿಮನಾಗಿರುವೆನೆಂದು ಸೂಚಿಸಿ ಹಿರ್ಕಲ್, ತಬೂಕ್‌ನಿಂದ ಪ್ರವಾದಿಯವರಿಗೆ(ಸ) ಪತ್ರ ಬರೆದಿದ್ದರು. ಆದರೂ ಪ್ರವಾದಿಯವರು(ಸ) ಹಿರ್ಕಲ್‌ರನ್ನು ಕ್ರೈಸ್ತನೆಂದೇ ಹೇಳಿದ್ದರು.

# ಶೂರ ಅಬೂದರ್(ರ)

'ಗಿಫಾರ್' ಗೋತ್ರದ ಅಬೂದರ್‌ರಿಗೆ, ಪ್ರವಾದಿತ್ವವನ್ನು ವಾದಿಸುವ ಒಬ್ಬರು ಮಕ್ಕಾದಲ್ಲಿ ಪ್ರತ್ಯಕ್ಷರಾಗಿರುವರೆಂಬ ಸುದ್ದಿ ತಲಪಿತು. ಆ ಕುರಿತು ಹೆಚ್ಚಿನ ವಿವರ ತಿಳಿದು ಬರಲಿಕ್ಕಾಗಿ ಸಹೋದರ 'ಉನೈಸ್'ನನ್ನು ಪ್ರವಾದಿಯವರ(ಸ) ಬಳಿಗೆ ಕಳುಹಿಸಲು ನಿರ್ಧರಿಸಿದರು. ಸಹೋದರನಿಗೆ ಪಯಣದ ಹಾದಿಯನ್ನು ತಿಳಿಸಿ ಆತನೊಡನೆ ಹೀಗೆಂದರು: "ನಾನು ಪ್ರವಾದಿ, ನನಗೆ ಆಕಾಶಲೋಕದಿಂದ ಸಂದೇಶ ಬರುತ್ತಿದೆಯೆಂದು ವಾದಿಸುತ್ತಿರುವ ಆ ವ್ಯಕ್ತಿಯನ್ನು ನೀನು ಹೋಗಿ ಭೇಟಿಯಾಗಬೇಕು. ಅವರೊಂದಿಗೆ ಮುಖತಃ ಮಾತುಕತೆ ನಡೆಸಿ ಅವರ ನೈಜ ಸ್ಥಿತಿಗತಿಗಳನ್ನು ತಿಳಿದು ಬಂದು ನನಗೆ ವಿವರವಾಗಿ ತಿಳಿಸಬೇಕು."

ಸಹೋದರನ ಆದೇಶದಂತೆ 'ಉನೈಸ್' ಮಕ್ಕಾಕ್ಕೆ ಹೋಗಿ ಪ್ರವಾದಿಯವರನ್ನು ಭೇಟಿಯಾಗಿ ಸಂಭಾಷಣೆ ನಡೆಸಿ ಮರಳಿದರು. ಆಗ ಅಬೂದರ್(ರ) ಸಹೋದರನೊಡನೆ, "ನಿನಗೆ ಅಲ್ಲಿ ಯಾವ ವಿವರ ದೊರೆಯಿತು" ಎಂದು ವಿಚಾರಿಸಿದರು. ಉನೈಸ್ ಹೀಗೆ ಉತ್ತರಿಸಿದರು: "ಅಲ್ಲಾಹನಾಣೆ! ಎಲ್ಲ ಒಳಿತುಗಳು, ವಿಶೇಷತಃ ಸದ್ಗುಣವನ್ನು ಆದೇಶಿಸಿ ದುರ್ಗುಣಗಳನ್ನು ನಿಷೇಧಿಸುವ ಓರ್ವ ಸದ್ಗುಣ ಸಂಪನ್ನನನ್ನು ನಾನು ಅವರಲ್ಲಿ ಕಂಡೆ. ನಾನು ಅವರಿಂದ ವಿಶಿಷ್ಟ ವಚನಗಳನ್ನು ಆಲಿಸಿದೆ. ಅದು ಖಂಡಿತ ಕಾವ್ಯವಲ್ಲ."

ಸಹೋದರನಿಂದ ದೊರೆತ ಈ ಸಂಕ್ಷಿಪ್ತ ಉತ್ತರದಿಂದ 'ಅಬೂದರ್'ರಿಗೆ ತೃಪ್ತಿಯಾಗಲಿಲ್ಲ. ಅವರು ಸ್ವತಃ ಮಕ್ಕಾಕ್ಕೆ ಹೋಗಲು ನಿರ್ಧರಿಸಿದರು. ನೀರು ತುಂಬುವ ಚೀಲ ಮತ್ತು ಬೆತ್ತವನ್ನು ಹಿಡಿದು ಪಯಣ ಹೊರಟರು. ಕಅಬಾ ತಲಪುವುದೇ ಅವರ ಗುರಿಯಾಗಿತ್ತು. ಅಲ್ಲಿಗೆ ಹೋದರೆ ಪ್ರವಾದಿಯವರನ್ನು(ಸ) ಭೇಟಿಯಾಗಬಹುದೆಂದು ಭಾವಿಸಿದರು. ಅವರಿಗೆ ಪ್ರವಾದಿಯವರ(ಸ) ಪರಿಚಯವಿರಲಿಲ್ಲ; ಇತರರೊಡನೆ ಕೇಳಲೂ ಅವರಿಗೆ ಮನಸ್ಸಾಗಲಿಲ್ಲ. 'ಝಮ್ ಝಮ್' ನೀರು ಕುಡಿದು ಅವರು ಇಡೀ ದಿನ ಮಸೀದಿಯಲ್ಲಿ ತಂಗಿದರು. ರಾತ್ರೆ ತುಂಬಾ ತಡವಾಗಿ ಅಲೀಯವರು(ರ) ಅಬೂದರ್‌ರನ್ನು ನೋಡಿದರು. ಅವರು ಪರ ಊರಿನವರೆಂದು ಅಲೀ(ರ) ಗ್ರಹಿಸಿದರು. "ನೀವು ಪರ ಊರಿನವರೇ?" ಅಲೀ(ರ) ಅವರೊಡನೆ ಪ್ರಶ್ನಿಸಿದರು. 'ಹೌದು' ಅಬೂದರ್ ಉತ್ತರಿಸಿದರು." ಹಾಗಿದ್ದರೆ ನೀವು ನನ್ನ ಜತೆ ಮನೆಗೆ ಬನ್ನಿ" ಅಲೀ(ರ) ವಿನಂತಿಸಿದರು.

ಪ್ರಥಮ ಸಂದರ್ಶನದ ಈ ಸಂಭಾಷಣೆಯ ಬಳಿಕ ಇಬ್ಬರೂ ಅಲೀಯವರ(ರ) ಮನೆಯತ್ತ ಹೊರಟರು. ಅಬೂದರ್ರ್(ರ) ಅಲೀಯವರಿಗೆ(ರ) ತನ್ನ ಆಗಮನೋದ್ದೇಶವನ್ನು ತಿಳಿಸಲಿಲ್ಲ. ಅಂತೆಯೇ ಅವರಿಂದಲೂ ಏನನ್ನೂ ವಿಚಾರಿಸಲಿಲ್ಲ. ಬೆಳಗಾತ ಅವರು ನೀರಿನ ಚೀಲ ಮತ್ತು ಆಹಾರವನ್ನು ಹಿಡಿದು ಮಸೀದಿಗೆ ಹೋದರು. ಪ್ರವಾದಿಯವರ(ಸ) ಕುರಿತು ವಿಚಾರಿಸಲಿಕ್ಕಾಗಿ ಅವರು ಬಂದಿದ್ದರು. ಸಂಜೆಯ ತನಕ ಅವರು ವಿಚಾರಿಸಿದರು. ಆದರೆ ಯಾರೂ ಅವರಿಗೆ ಪ್ರವಾದಿಯವರನ್ನು(ಸ) ತೋರಿಸಲಿಲ್ಲ. ಅವರ ವಿವರವನ್ನು ತಿಳಿಸಲಿಲ್ಲ. ಹಾಗೆಯೇ ಅವರು ಮಲಗುವ ಸಿದ್ಧತೆ ನಡೆಸುತ್ತಿದ್ದಾಗ ಅಲೀ(ರ) ಅಲ್ಲಿಗೆ ಬಂದರು. ಅವರನ್ನು ನೋಡಿದ ಕೂಡಲೇ, "ಈ ಮಹಾನುಭಾವನಿಗೆ ಎಲ್ಲಿ ಉಳಕೊಳ್ಳಬೇಕೆಂದು ತಿಳಿಯಪಡಿಸಿಯೂ ಅರ್ಥವಾಗಿಲ್ಲವೇ?"[1] ಎಂದು ಕೇಳಿದರು. ಅದನ್ನು ಕೇಳಿ ಅಬೂದರ್ರ್(ರ) ಇಲ್ಲವೆಂದು ಉತ್ತರಿಸಿದರು. "ಹಾಗಾದರೆ, ನನ್ನ ಜತೆ ಬನ್ನಿ! ಎನ್ನುತ್ತಾ" ಅವರನ್ನು ಅಲೀ(ರ) ಜತೆಯಲ್ಲಿ ಕರೆದೊಯ್ದರು.

ಅಂತೆಯೇ ಅವರಿಬ್ಬರೂ ಅಲೀಯವರ(ರ) ಮನೆಗೆ ಹೊರಟರು. ಅಂದು ಕೂಡಾ ಅವರು ಪರಸ್ಪರ ಮಾತಾಡಲಿಲ್ಲ. ಮರುದಿನವೂ ಅಬೂದರ್ರ್ ಹಿಂದಿನ ದಿನದಂತೆಯೇ ಮಸೀದಿಗೆ ಮರಳಿದರು. ರಾತ್ರಿಯಾದಾಗ ಹಿಂದಿನ ದಿನದಂತೆಯೇ ಮಲಗುವ ಸಿದ್ಧತೆ ನಡೆಸುತ್ತಿರುವ ಅಬೂದರ್ರ್‌ರನ್ನು ನೋಡಿದ ಅಲೀಯವರು(ರ) ಹಿಂದಿನ ದಿನದಂತೆಯೇ ಹೇಳಿ ಅವರನ್ನು ತಮ್ಮ ಮನೆಗೆ ಆಮಂತ್ರಿಸಿದರು. ಮನೆಗೆ ಹೋಗುತ್ತಿದ್ದಾಗ ದಾರಿಯಲ್ಲಿ ಅಲೀ(ರ) ಪ್ರಶ್ನಿಸಿದರು: "ನೀವು ಬಂದ ಕಾರಣವೇನೆಂದು ನನಗೆ ತಿಳಿಸಿಲ್ಲವಲ್ಲಾ." ಅಬೂದರ್ರ್(ರ), ಹೀಗೆಂದರು: "ನಾನು ಹೇಳುವ ವಿಷಯವನ್ನು ನೀವು ರಹಸ್ಯವಾಗಿಡುವುದಾದರೆ ಮತ್ತು ನನಗೆ ಮಾರ್ಗದರ್ಶನ ನೀಡುವೆನೆಂದು ಮಾತು ಕೊಟ್ಟರೆ ನಾನು ಹೇಳುತ್ತೇನೆ." ಅದಕ್ಕೆ ಅಲೀ(ರ) ಒಪ್ಪಿದರು. ಆಗ ಅಬೂದರ್ರ್(ರ) ತಮ್ಮ ಆಗಮನೋದ್ದೇಶವನ್ನು ವಿವರಿಸುತ್ತಾ ಹೀಗೆ ಹೇಳಿದರು: "ಇಲ್ಲಿ ಪ್ರವಾದಿಯೆಂದು ವಾದಿಸುವ ಒಬ್ಬರು ಆಗಮಿಸಿರುವರೆಂದು ತಿಳಿಯಿತು. ಅದರ ವಾಸ್ತವಿಕತೆಯನ್ನು ತಿಳಿಯಲಿಕ್ಕಾಗಿ ಅವರೊಡನೆ ಸಂಭಾಷಣೆ ನಡೆಸಲು ನಾನು ಸಹೋದರನನ್ನು ಕಳುಹಿಸಿದ್ದೆ. ಆತನಿಂದ ದೊರೆತ ಮಾಹಿತಿಗಳಿಂದ ನನಗೆ ತೃಪ್ತಿಯಾಗಲಿಲ್ಲ. ಆದ್ದರಿಂದ, ಅವರನ್ನು ನಾನೇ ಸ್ವತಃ ಭೇಟಿಯಾಗಿ ಮಾತಾಡಬೇಕೆಂಬ ಉದ್ದೇಶದಿಂದ ಬಂದೆ."

ಅಲೀ(ರ): "ನೀವು ಕೇಳಿದ ಸುದ್ದಿ ನಿಜ, ಅವರು ಸಂದೇಶವಾಹಕರಾಗಿದ್ದಾರೆ. ಈಗ ನೀವು ನಡೆಯುತ್ತಿರುವ ದಾರಿಯು ಅಲ್ಲಿಗೆ ತಲಪುತ್ತದೆ. ನಾನು ಕೂಡಾ ಅಲ್ಲಿಗೇ ಹೋಗುತ್ತಿದ್ದೇನೆ. ನನ್ನನ್ನು ಹಿಂಬಾಲಿಸಿರಿ. ನಾನು ಹೋಗುವಲ್ಲಿಗೆ ಬನ್ನಿರಿ. ನಿಮ್ಮ ಬಗ್ಗೆ

1. ಹಿಂದಿನ ದಿನ ಅವರು ತಮ್ಮ ಮನೆಗೆ ಕರೆದೊಯ್ದಿದ್ದರಲ್ಲವೇ. ಹಾಗೆಯೇ ಈ ದಿನವೂ ಅಲ್ಲಿ ಹೋಗಿ ಉಳಕೊಳ್ಳುವುದಕ್ಕೆ ಯಾವ ಅಡ್ಡಿಯೂ ಇಲ್ಲವೆಂದರ್ಥ.

ಏನಾದರೂ ಸಂದೇಹಾಸ್ಪದ ಸೂಚನೆ ಕಂಡು ಬಂದರೆ ನಾನು ಚಪ್ಪಲಿ ಸರಿಮಾಡುವಂತೆ ಗೋಡೆಯ ಬದಿಗೆ ಸರಿದು ನಿಲ್ಲುತ್ತೇನೆ. ನೀವು ಸೀದಾ ಮುಂದೆ ಹೋಗಿರಿ."

ಹೀಗೆಯೇ ಅಬೂದರ್‍(ರ) ಅಲೀಯವರನ್ನು(ರ) ಹಿಂಬಾಲಿಸಿದರು. ಪ್ರವಾದಿಯವರು(ಸ) ಅಂದು 'ದಾರುಲ್ ಅರ್ಖಮ್'ನಲ್ಲಿ ತಂಗಿದ್ದರು. ಅಲ್ಲಿಗೆ ತಲಪಿದಾಗ ಅವರೀರ್ವರೂ ಪ್ರವಾದಿಯವರನ್ನು(ಸ) ಭೇಟಿಯಾದರು. "ಇಸ್ಲಾಮಿನ ಆದೇಶಗಳನ್ನು ನನಗೆ ವಿವರಿಸಿರಿ." ಅಬೂದರ್‍(ರ), ಪ್ರವಾದಿಯೊಡನೆ(ಸ) ವಿನಂತಿಸಿದರು. ಪ್ರವಾದಿವರ್ಯರು(ಸ) ಎಲ್ಲವನ್ನೂ ಅವರಿಗೆ ವಿವರವಾಗಿ ತಿಳಿಸಿದರು. ಪ್ರವಾದಿಯವರ(ಸ) ಪಾವನ ನಾಲಗೆಯಿಂದ ಆ ಸತ್ಯ ಸಂದೇಶವನ್ನು ಶ್ರದ್ಧೆಯಿಂದ ಆಲಿಸಿದ ಅಬೂದರ್‍(ರ) ಅವರ ಹೃದಯವು ಸತ್ಯವಿಶ್ವಾಸದಿಂದ ತುಂಬಿ ತುಳುಕಿತು. ಅವರು ಆ ಕೂಡಲೇ ಇಸ್ಲಾಮ್ ಸ್ವೀಕರಿಸಿರುವುದಾಗಿ ಸಾರಿದರು. ಆಗ ಪ್ರವಾದಿವರ್ಯರು(ಸ), "ಅಬೂದರ್‍, ನೀವು ಇಸ್ಲಾಮ್ ಸ್ವೀಕರಿಸಿದ ವಿಷಯವನ್ನು ಇಲ್ಲಿ ಬಹಿರಂಗಪಡಿಸದೆ ನೇರ ಊರಿಗೆ ಹೋಗಿರಿ" ಎಂದು ಸೂಚಿಸಿದರು. ಅದಕ್ಕೆ ಅಬೂದರ್‍(ರ) ದೃಢ ಸ್ವರದಿಂದ ಹೀಗೆಂದರು: "ನಿಮ್ಮನ್ನು ಪ್ರವಾದಿಯಾಗಿ ನೇಮಿಸಿದ ಅಲ್ಲಾಹನಾಣೆ! ನಾನು ಈ ವಿಷಯವನ್ನು ಕುರೈಶರ ಮಧ್ಯೆ ಬಹಿರಂಗವಾಗಿ ಸಾರುತ್ತೇನೆ."

ಕುರೈಶರೆಲ್ಲರೂ ಕಅಬಾದಲ್ಲಿ ಸೇರಿದ್ದಾರೆ. ಆಗ ಅಬೂದರ್‍(ರ) ಅಲ್ಲಿಗೆ ಬಂದರು. "ಕುರೈಶರೇ! ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ, ಮುಹಮ್ಮದ್(ಸ) ಆತನ ದಾಸ ಮತ್ತು ಸಂದೇಶವಾಹಕನೆಂದು ಸಾಕ್ಷ್ಯ ವಹಿಸುತ್ತೇನೆ" ಎಂದು ಗಟ್ಟಿಯಾಗಿ ಕೂಗಿ ಹೇಳಿದರು. ತಕ್ಷಣ ಅವರೆಲ್ಲರೂ, "ನಾವು ಆ ಸಾಬಿಯ ಕಥೆ ಮುಗಿಸೋಣ" ಎನ್ನುತ್ತಾ ಅವರ ಮೇಲೆ ಮುಗಿಬಿದ್ದರು. ತರುವಾಯ ಅವರಿಗೆ ಸಿಕ್ಕಾಪಟ್ಟೆ ಹೊಡೆದರು. ಅಷ್ಟರಲ್ಲಿ ಪ್ರವಾದಿವರ್ಯರ(ಸ) ಚಿಕ್ಕಪ್ಪ 'ಅಬ್ಬಾಸ್' ಅಲ್ಲಿಗೆ ಬಂದರು. ಅಬೂದರ್‍ರನ್ನು(ರ) ಅವರಿಂದ ದೂರಸರಿಸಿದರು. ಅನಂತರ ಕುರೈಶರೊಂದಿಗೆ ಹೀಗೆಂದರು: "ನೀವು ನಿಮ್ಮನ್ನೇ ನಾಶಪಡಿಸುತ್ತಿದ್ದೀರಾ? ನಾವು ಸಿರಿಯಾಕ್ಕೆ ವ್ಯಾಪಾರಕ್ಕಾಗಿ ಹೋಗ ಬೇಡವೇ? ಇವರು ಅಲ್ಲಿಗೆ ಹೋಗುವ ಹಾದಿಯಲ್ಲಿರುವ 'ಗಿಫಾರಿ' ಗೋತ್ರಕ್ಕೆ ಸೇರಿದ್ದಾರೆ. ಇವರನ್ನು ನೀವು ಕೊಲ್ಲುತ್ತಿದ್ದೀರಾ? ಅವರ ಹಾದಿಯ ಮೂಲಕವೇ ನಾವು ಸಂಚರಿಸಬೇಕಾಗಿದೆಯಲ್ಲವೇ?" ಇದನ್ನು ಕೇಳಿ ಕುರೈಶರು ಆ ದೌರ್ಜನ್ಯವನ್ನು ನಿಲ್ಲಿಸಿದರು.

ಮರುದಿನ ಬೆಳಿಗ್ಗೆ ಕುರೈಶರು ಕಅಬಾ ಭವನದಲ್ಲಿದ್ದಾಗಲೇ ಅಬೂದರ್‍(ರ) ಪುನಃ ಅಲ್ಲಿಗೆ ಹೋದರು. ನಿನ್ನೆಯಂತೆಯೇ ಪುನಃ ಆ ಪವಿತ್ರ ವಚನವನ್ನು ಹೇಳಿದರು: "ಆ ಸಾಬಿಯನ್ನು ಬಿಡಬೇಡಿರಿ" ಎನ್ನುತ್ತಾ ಪುನಃ ಅವರೆಲ್ಲರೂ ಮುಗಿಬಿದ್ದು ಅಬೂದರ್‍ರನ್ನು(ರ) ಚೆನ್ನಾಗಿ ಥಳಿಸಿದರು. ಆ ಕೂಡಲೇ ಅಬ್ಬಾಸ್(ರ) ಬಂದು ಅವರನ್ನು ರಕ್ಷಿಸಿದರು. ಹಿಂದಿನ

ದಿನ ಹೇಳಿದ ಮಾತುಗಳನ್ನೇ ಅವರು-ಪುನರುಚ್ಚರಿಸಿದರು. ಇದು ಅಬೂದರ್ರ್(ರ) ಅವರು ಇಸ್ಲಾಮಿಗೆ ಸೇರಿದ ಕಥೆ. (ಬುಖಾರಿ)

**ಟಿಪ್ಪಣಿಗಳು:**

1. ಈ ಕಥೆಯು ಅಬೂದರ್ರ್‌ರ(ರ) ವಿಶ್ವಾಸದ ದೃಢತೆಯನ್ನು ಸೂಚಿಸುತ್ತದೆ. ವಿಶ್ವಾಸದ ಕಿರಣಗಳು ಅವರ ಹೃದಯದಲ್ಲಿ ಬೆಳಗಿದುವು. ಇದರಿಂದಾಗಿ ಅವರಿಗೆ ಒಂದು ಮಹಾ ಕೋಟೆಯೊಳಗೆ ಪ್ರವೇಶಿಸಿದಂತೆ ಭಾಸವಾಯಿತು. ಅದರ ಹೊರಗಿರುವುದನ್ನೆಲ್ಲ ಅವರು ತೃಣೀಕರಿಸಿದರು. ಈಗ ಅವರಿಗೆ ಇಸ್ಲಾಮನ್ನು ವಿರೋಧಿಸುವ ಎಲ್ಲ ದುಷ್ಟಶಕ್ತಿಗಳೂ ಕಸ ಸಮಾನವಾಗಿದ್ದುವು. ಇಸ್ಲಾಮಿಗಾಗಿ ಪ್ರಾಣ ತ್ಯಾಗಕ್ಕೂ ಅವರು ಹಿಂಜರಿಯಲಿಲ್ಲ. ಸತ್ಯವನ್ನು ದಾರುಣವಾಗಿ ಮರ್ದಿಸುತ್ತಿರುವುದನ್ನು ನೋಡಿ ಅವರು ಕೆಂಡಾಮಂಡಲರಾಗಿದ್ದರು! ಆದ್ದರಿಂದಲೇ ಅಪಾಯದ ಸೂಚನೆಯಿದ್ದರೂ ತಮ್ಮ ವಿಶ್ವಾಸವನ್ನು ಬಹಿರಂಗವಾಗಿ ಸಾರಲು ಮುಂದಾದರು.

2. ಅಲ್ಪಕಾಲದಲ್ಲಿ ಜಗತ್ತಿನ ಸ್ಥಿತಿಗತಿಯನ್ನು ಬದಲಾಯಿಸಲು ಪ್ರವಾದಿ(ಸ) ಮತ್ತು ಅವರ ಸಂಗಾತಿಗಳಿಗೆ ಸಾಧ್ಯವಾಗಿರುವುದಕ್ಕೆ ಇಂತಹ ಮಂದಿಯ ವಿಶ್ವಾಸ ದಾರ್ಢ್ಯ ಮತ್ತು ತ್ಯಾಗ ಮನೋಭಾವವೇ ಪ್ರತ್ಯಕ್ಷ ಕಾರಣವಾಗಿತ್ತು. ಇಂದು ಅಬೂದರ್ರ್‌ರಂತಹ(ರ) ಕೆಲವು ವ್ಯಕ್ತಿಗಳು ಇಸ್ಲಾಮಿಗೆ ಲಭಿಸಿದರೆ ನಾಸ್ತಿಕತೆ ಮತ್ತು ಧರ್ಮ ನಿರಪೇಕ್ಷ ಲೌಕಿಕತೆಯು ಆವರಿಸಿರುವ ಆಧುನಿಕ ಯುಗವನ್ನು ಇಸ್ಲಾಮಿನತ್ತ ಆಕರ್ಷಿಸಿ ಜಗತ್ತಿನ ಜನತೆಯನ್ನು ಇಸ್ಲಾಮಿನ ಬೆಂಬಲಿಗರಾಗಿ ಮಾರ್ಪಡಿಸಬಹುದಾಗಿದೆ. ಆಧುನಿಕ ಜಾಹಿಲಿಯ್ಯತ್‌ನ ಮಾಯಾಕೋಟೆಯು ಕುಸಿಯಬೇಕಾದರೆ ಅಬೂದರ್ರ್‌ರಂತಹ ಇಸ್ಲಾಮೀ ಸ್ಫೂರ್ತಿ ಮತ್ತು ಸ್ಥೈರ್ಯವಿರುವ ಸತ್ಯವಿಶ್ವಾಸಿಗಳ ಸಂಖ್ಯೆ ಹೆಚ್ಚಬೇಕಾಗಿದೆ.

3. ಸತ್ಯವಿಶ್ವಾಸ ಸ್ವೀಕರಿಸುವುದನ್ನು ಬಹಿರಂಗ ಪಡಿಸಬೇಡಿರೆಂಬ ಪ್ರವಾದಿಯವರ(ಸ) ಆದೇಶವನ್ನು ಅಬೂದರ್ರ್(ರ) ಕಡೆಗಣಿಸಿದ್ದು ಕೆಲವರಿಗೆ ಆಜ್ಞೋಲ್ಲಂಘನೆಯಾಗಿ ಕಾಣಬಹುದು. ಆದರೆ ಕಥೆಯನ್ನು ಗಮನವಿಟ್ಟು ಓದಿದರೆ ವಾಸ್ತವಿಕತೆ ಮನವರಿಕೆಯಾದೀತು. ಪ್ರವಾದಿಯವರು(ಸ) ಆರಂಭದಲ್ಲಿ ಹಾಗೆ ಹೇಳಿದರೂ ನಾನು ವಿಶ್ವಾಸವನ್ನು ಬಹಿರಂಗ ಪಡಿಸುವೆನೆಂದು ಅಬೂದರ್ರ್(ರ) ತಿಳಿಸಿದಾಗ ಅವರು ಮೌನ ವಹಿಸಿದ್ದರು. ಮೌನವು ಸಮ್ಮತಿಯ ಲಕ್ಷಣವೆಂಬುದು ಸಾಮಾನ್ಯ ನಿಯಮವಾಗಿದೆ.

+++

# ಗುಹೆಯಲ್ಲಿ ಸಿಲುಕಿದ ಗುಣವಂತರು

ಒಮ್ಮೆ ಇಸ್ರಾಈಲ್ ಸಮುದಾಯದ ಮೂವರು ಒಂದು ಗುಹೆಯಲ್ಲಿ ಆಶ್ರಯ ಪಡೆದರು. ಅವರು ಅದರೊಳಗೆ ಪ್ರವೇಶಿಸಿದ ಬಳಿಕ ಮೇಲಿನಿಂದ ಒಂದು ಬಂಡೆಯು ಉರುಳಿ ಗುಹೆಯ ಪ್ರವೇಶ ದ್ವಾರ ಮುಚ್ಚಿ ಬಿಟ್ಟಿತು. ಇದರಿಂದ ಕಳವಳಗೊಂಡ ಅವರು, "ನಾವು ಮಾಡಿರುವ ಸತ್ಕರ್ಮಗಳನ್ನು ಸ್ಮರಿಸಿ ಅಲ್ಲಾಹನೊಡನೆ ಪ್ರಾರ್ಥಿಸೋಣ. ಅನ್ಯಥಾ ನಮಗೆ ಈ ವಿಪತ್ತಿನಿಂದ ಮುಕ್ತಿ ದೊರೆಯಲಾರದು" ಎಂದು ಪರಸ್ಪರ ಅಭಿಪ್ರಾಯ ಪಟ್ಟರು.

ಹಾಗೆಯೇ ಅವರಲ್ಲೋರ್ವನು ಪ್ರಾರ್ಥಿಸಲಾರಂಭಿಸಿದನು: "ಅಲ್ಲಾಹನೇ! ನನಗೆ ವೃದ್ಧ ತಂದೆತಾಯಿಯರಿದ್ದರು. ನಾನು ನಮ್ಮ ಆಹಾರವಾಗಿರುವ ಹಾಲನ್ನು ನನ್ನ ಮಕ್ಕಳು ಮರಿಗಳಿಗೆ ನೀಡುವುದಕ್ಕಿಂತ ಮುಂಚೆ ತಂದೆತಾಯಿಯವರಿಗೆ ಕುಡಿಸುತ್ತಿದ್ದೆ. ಒಂದು ದಿನ ಸೌದೆಗಾಗಿ ನನಗೆ ಸ್ವಲ್ಪ ದೂರ ಹೋಗ ಬೇಕಾಯಿತು. ತಂದೆ ತಾಯಿಗಳು ಮಲಗುವುದಕ್ಕಿಂತ ಮುಂಚೆ ನನಗೆ ಮನೆಗೆ ಮರಳಲಾಗಲಿಲ್ಲ. ನಾನು ಮರಳಿದ ಬಳಿಕ ಹಾಲು ಕರೆದು, ನಿದ್ರಿಸುತ್ತಿದ್ದ ತಂದೆ ತಾಯಿಗಳ ಬಳಿ ಹೋಗಿ ನಿಂತೆ. ಅವರನ್ನು ನಿದ್ರೆಯಿಂದ ಎಬ್ಬಿಸಲು ಅಥವಾ ಅವರಿಗಿಂತ ಮುಂಚೆ ಪತ್ನಿ ಮಕ್ಕಳಿಗೆ ಹಾಲು ಕುಡಿಸಲು ಮನಸ್ಸು ಒಪ್ಪಲಿಲ್ಲ. ಹಾಲಿನ ಪಾತ್ರೆ ಹಿಡಿದು ನಾನು ಅಲ್ಲಿಯೇ ನಿಂತೆ. ಇದೇ ಸ್ಥಿತಿಯಲ್ಲಿ ಅವರು ನಿದ್ರೆಯಿಂದ ಎಚ್ಚರಗೊಳ್ಳುವುದನ್ನು ಕಾಯುತ್ತಾ ಬೆಳಗಿನ ತನಕ ಉಳಿದೆ. ಮಕ್ಕಳು ನನ್ನ ಕಾಲ ಬುಡದಲ್ಲಿ ಬಿದ್ದು ಅಳುತ್ತಿದ್ದರು. ಹಾಗಿದ್ದರೂ ತಂದೆತಾಯಂದಿರಿಗಿಂತ ಮುಂಚೆ ಅವರ ಹಸಿವು ತಣಿಸಲು ಅಂಜಿದೆ. ಹಾಗೆಯೇ ತಂದೆತಾಯಿಯವರಿಗೆ ಎಚ್ಚರವಾದಾಗ ನಾನು ಅವರಿಗೆ ನನ್ನ ಕೈಯಲ್ಲಿದ್ದ ಹಾಲನ್ನು ಕೊಟ್ಟೆ. ಅವರು ಅದನ್ನು ಕುಡಿದು ಹಸಿವು ನೀಗಿಸಿದರು. ಅಲ್ಲಾಹನೇ! ಕೇವಲ ನಿನ್ನ ಸಂಪ್ರೀತಿಯನ್ನು ಬಯಸಿ ನಾನು ಹಾಗೆ ಮಾಡಿರುವೆನು. ಆದ್ದರಿಂದ ಉರುಳಿ ಬಿದ್ದ ಈ ಬಂಡೆಕಲ್ಲಿನಿಂದಾಗಿ ನಮಗಾಗಿರುವ ಅಪಾಯದಿಂದ ನಮ್ಮನ್ನು ರಕ್ಷಿಸು!" ಪ್ರಾರ್ಥನೆ ಮುಗಿದ ಕೂಡಲೇ ಬಂಡೆ ಸ್ವಲ್ಪ ಸರಿಯಿತು! ಆದರೆ ಅದರಿಂದ ಅವರಿಗೆ ಹೊರಗೆ ಹೋಗಲಾಗಲಿಲ್ಲ.

ಎರಡನೆಯಾತ ಪ್ರಾರ್ಥಿಸಿದ: "ನನ್ನೋರ್ವ ಚಿಕ್ಕಪ್ಪನ ಪುತ್ರಿಯಿದ್ದಳು. ನನಗೆ ಆಕೆಯಲ್ಲಿ ಸಾಮಾನ್ಯವಾಗಿ ಪುರುಷರು ಸ್ತ್ರೀಯರನ್ನು ಪ್ರೀತಿಸುವುದಕ್ಕಿಂತ ಹೆಚ್ಚಿನ ಅನುರಾಗ ವುಂಟಾಯಿತು. ನಾನು ಕಾಮಶಮನದ ಬಯಕೆಯಿಂದ ಆಕೆಯ ಬಳಿ ಹೋದಾಗಲೆಲ್ಲ ಆಕೆ ನಿರಾಕರಿಸುತ್ತಿದ್ದಳು. ಹೀಗಿರಲು ಒಮ್ಮೆ ಬರಗಾಲ ಪೀಡಿತ ಸಮಯದಲ್ಲಿ ಆಕೆ ನನ್ನ ಬಳಿಗೆ ಬಂದಳು. ನಾನು ಮತ್ತು ಆಕೆಯು ಒಂದು ಗುಪ್ತ ಸ್ಥಳದಲ್ಲಿ ಸೇರಬೇಕೆಂಬ ಶರತ್ತಿನಲ್ಲಿ ನಾನು ಆಕೆಗೆ 100 ದಿನಾರಗಳನ್ನು ನೀಡಿದೆ. ಹಾಗೆಯೇ ಆಕೆಯು ನನ್ನ ಬಯಕೆಯನ್ನು ಈಡೇರಿಸುವುದಕ್ಕೆ ಒಪ್ಪಿ ನಿರ್ದಿಷ್ಟ ಸ್ಥಳಕ್ಕೆ ಬಂದಳು. ನಾನು ಆಕೆಯ ತೊಡೆಗಳ ಮಧ್ಯೆ ಎರಗಲು ಹೋದೆ! "ಅಲ್ಲಾಹನನ್ನು ಭಯಪಡಿರಿ. ಹಕ್ಕಿಲ್ಲದೆ ನೀವು ನನ್ನ ಕನ್ಯಾ ಪೊರೆಯನ್ನು ಹರಿಯ ಬೇಡಿರಿ" ಎಂದು ಆ ಸಂದರ್ಭದಲ್ಲಿ ಆಕೆ ವಿನಂತಿಸಿದಳು. ಆ ಮಾತು ಕಿವಿಗೆ ಬಿದ್ದ ಕೂಡಲೇ ನನಗೆ ಆಕೆಯೊಡನೆ ಅತಿರೇಕ ಪ್ರೇಮವಿದ್ದರೂ ನಾನು ನನ್ನ ಉಪಕ್ರಮದಿಂದ ಹಿಂದೆ ಸರಿದೆ. ಆಕೆಗೆ ನೀಡಿದ್ದ ಹಣವನ್ನು ಮನ್ನಾ ಮಾಡಿದೆ. ಅಲ್ಲಾಹನೇ! ಕೇವಲ ನಿನ್ನ ಸಂಪ್ರೀತಿಯ ಬಯಕೆಯಿಂದ ನಾನು ಹೀಗೆ ಮಾಡಿದ್ದೇನೆ. ಆದ್ದರಿಂದ ನಾವು ಸಿಲುಕಿರುವ ಈ ವಿಪತ್ತಿನಿಂದ ನಮ್ಮನ್ನು ಪಾರುಗೊಳಿಸು!" ತಕ್ಷಣ ಬಂಡೆ ಮತ್ತಷ್ಟು ಸರಿಯಿತು! ಆದರೂ, ಗುಹೆಯಿಂದ ಹೊರ ಹೋಗಲು ಅವರಿಗೆ ಸಾಧ್ಯವಿರಲಿಲ್ಲ.

ಮೂರನೆಯಾತ ಪ್ರಾರ್ಥಿಸಿದ: "ಅಲ್ಲಾಹನೇ! ನಾನು ಅನೇಕ ಕೂಲಿಯಾಳುಗಳನ್ನು ಕೆಲಸಕ್ಕೆ ನೇಮಿಸಿದ್ದೆ. ಎಲ್ಲರಿಗೂ ಕೆಲಸ ಮುಗಿದ ಕೂಡಲೇ ಕೂಲಿಯನ್ನು ಕೊಟ್ಟೆ. ಒಬ್ಬನು ಮಾತ್ರ ಕೂಲಿಯನ್ನು ನನ್ನಲ್ಲೇ ಬಿಟ್ಟು ಎಲ್ಲಿಗೋ ಹೋದ. ತರುವಾಯ ಆತನ ಕೂಲಿಯ ಹಣವನ್ನು ಲಾಭದಾಯಕ ವ್ಯವಹಾರಗಳಲ್ಲಿ ತೊಡಗಿಸಿದೆ. ಕೆಲ ಕಾಲದ ಬಳಿಕ ಆತ ಬಂದು ನನ್ನೊಡನೆ ಕೂಲಿಯ ಹಣವನ್ನು ಕೇಳಿದ. ನಾನು ಆತನಿಗೆ ಅನೇಕ ಒಂಟೆ, ದನ, ಆಡು ಮತ್ತು ಗೋಧಿಹಿಟ್ಟು ಇತ್ಯಾದಿಗಳನ್ನು ತೋರಿಸುತ್ತಾ ಹೇಳಿದೆ: 'ಇದೆಲ್ಲವೂ ನಿನ್ನ ಕೂಲಿಯಾಗಿದೆ. ಅವುಗಳನ್ನು ತೆಗೆದು ಕೋ.' 'ಅಲ್ಲಾಹನ ದಾಸನಾಗಿರುವ ಮಾನವಾ! ನೀವು ನನ್ನನ್ನು ಗೇಲಿ ಮಾಡಬೇಡಿರಿ.' ಎಂದು ಆತ ಉತ್ತರಿಸಿದ. ಆಗ ನಾನು, 'ನಿನ್ನನ್ನು ಗೇಲಿ ಮಾಡಿದ್ದಲ್ಲ. ನಿಜ ಸಂಗತಿಯನ್ನೇ ಹೇಳುತ್ತಿದ್ದೇನೆ' ಎಂದು ಮನವರಿಕೆ ಮಾಡಿಸಿದೆ. ನನ್ನ ಮಾತು ಸತ್ಯವೆಂದು ಖಚಿತವಾದ ಬಳಿಕ ಆತ ಸಂತೋಷದಿಂದ ಎಲ್ಲವನ್ನೂ ಸ್ವೀಕರಿಸಿ ಜಾನುವಾರುಗಳನ್ನು ಅಟ್ಟಿಕೊಂಡು ಹೋದ. ಅಲ್ಲಾಹನೇ! ನಾನು ಕೇವಲ ನಿನ್ನ ಸಂಪ್ರೀತಿಗಾಗಿ ಹೀಗೆ ಮಾಡಿದ್ದು ಹೌದೆಂದಾದರೆ ನಾವು ಸಿಲುಕಿರುವ ಈ ವಿಪತ್ತಿನಿಂದ ನೀನು ನಮ್ಮನ್ನು ವಿಮೋಚನೆಗೊಳಿಸು!" ಪ್ರಾರ್ಥನೆ ಮುಗಿದಾಗ ಬಂಡೆ ಸಂಪೂರ್ಣ ಸರಿಯಿತು. ಅವರು ಮೂವರೂ ಸಂತೋಷದಿಂದ ಹೊರ ಬಂದರು. (ಬುಖಾರಿ-ಮುಸ್ಲಿಮ್)

ಟಿಪ್ಪಣಿಗಳು:

1. ಮಾನವನು ದೇವಸಂಪ್ರೀತಿಯ ಪ್ರಾಮಾಣಿಕ ಬಯಕೆಯಿಂದ ಮಾಡುವ ಸತ್ಕರ್ಮಗಳು, ಕೇವಲ ಪರಲೋಕದಲ್ಲಿ ಮಾತ್ರವಲ್ಲ. ಐಹಿಕ ವಿಪತ್ತುಗಳಿಗೂ ಪರಿಹಾರ ವಾಗುವುದೆಂಬುದಕ್ಕೆ ಈ ಘಟನೆ ಸಾಕ್ಷಿಯಾಗಿದೆ.

2. ದೇವಸಂಪ್ರೀತಿ ಗಳಿಕೆಯ ಧ್ಯೇಯದಿಂದ ಮಾಡುವ ಸತ್ಕರ್ಮಗಳನ್ನು ಮುಂದಿಟ್ಟು ಅಲ್ಲಾಹನೊಡನೆ ಪ್ರಾರ್ಥಿಸ ಬಹುದು ಮತ್ತು ಅಲ್ಲಾಹನು ಅದನ್ನು ಸ್ವೀಕರಿಸುವನೆಂದು ಈ ಪ್ರವಾದಿ ವಚನ ಸ್ಪಷ್ಟಪಡಿಸುತ್ತದೆ.

3. ಆಪತ್ತಿಗೆ ಸಿಲುಕಿದಾಗ ಗತ ಮಹಾ ಪುರುಷರನ್ನು ಕರೆದು ಪ್ರಾರ್ಥಿಸಬೇಕಾಗಿಲ್ಲ. ಅದರ ಬದಲಾಗಿ ಸತ್ಕರ್ಮಗಳನ್ನು ಜ್ಞಾಪಿಸಿ ಅಲ್ಲಾಹನೊಡನೆ ಪ್ರಾರ್ಥಿಸಬೇಕು. ಅದರಿಂದ ಫಲದೊರೆಯುವುದೆಂದು ಇದರಿಂದ ಗ್ರಹಿಸಬಹುದಾಗಿದೆ. ಆಪತ್ಕಾಲಗಳಲ್ಲಿ ದೇವ ನಿಷೇಧಿಗಳ ಪ್ರಾರ್ಥನೆಗಳನ್ನು ಸ್ವೀಕರಿಸುವಂತಹ ಆ ಕರುಣಾಳುವು, ತನ್ನ ಆಪ್ತ ದಾಸರ ಪ್ರಾರ್ಥನೆಯನ್ನು ಸ್ವೀಕರಿಸಿ ಅವರನ್ನು ಆಪತ್ತಿನಿಂದ ಪಾರು ಮಾಡುವನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

4. ತಂದೆ ತಾಯಂದಿರ ಋಣ ಎಷ್ಟೊಂದು ಹಿರಿದಾಗಿದೆ ಮತ್ತು ಅವರ ಅನುಸರಣೆ ಮತ್ತು ಆರೈಕೆಯಲ್ಲಿ ನಿಷ್ಠೆ ತೋರುವ ಸತ್ಯವಿಶ್ವಾಸಿಗೆ ಅಲ್ಲಾಹನ ಬಳಿ ಎಂತಹ ಸ್ಥಾನವಿದೆ ಯೆಂದು ಈ ಪ್ರವಾದಿ ವಚನ ಸೂಚಿಸುತ್ತಿದೆ.

5. ಮಾನವನು ಕೆಲವೊಮ್ಮೆ ಭಾವಾತಿರೇಕದಿಂದ ಪಾಪ ಕಾರ್ಯಗಳಿಗೆ ಗುರಿಯಾಗುತ್ತಾನೆ. ಆದರೆ ಅಲ್ಲಾಹನ ಸ್ಮರಣೆಯು ಅದನ್ನು ಕಾರ್ಯಗತಗೊಳಿಸುವುದ ರಿಂದ ಆತನನ್ನು ಹಿಂಜರಿಸಿದರೆ ಆತನು ಅಲ್ಲಾಹನ ಸಮಕ್ಷಮ ಉನ್ನತ ಪದವಿ ಗಳಿಸುವನೆಂದು ಈ ಕಥೆಯಿಂದ ವ್ಯಕ್ತವಾಗುತ್ತದೆ. ಇಲ್ಲಿ ಒಬ್ಬ ಕಥಾ ನಾಯಕನ ದಾಹವು ಅತ್ಯಂತ ನೀಚವಾಗಿದ್ದರೂ ತನ್ನ ಚಿರಕಾಲದ ಬಯಕೆಯು ಈಡೇರುವ ಹಂತದಲ್ಲಿ, ವಿಶೇಷತಃ ಎಂತಹ ಪರಮ ಭಕ್ತನೂ ವಿಚಲಿತನಾಗಬಹುದಾದಂತಹ ಆ ಗಳಿಗೆಯಲ್ಲಿ ಹಾಗೂ, ಲೈಂಗಿಕ ತೀಟೆಯು ಪರಾಕಾಷ್ಠೆಗೆ ತಲಪಿರುವಂತಹ ಸಂದರ್ಭದಲ್ಲಿ, ತಾನು ದೀರ್ಘ ಕಾಲದಿಂದ ಪ್ರೀತಿಸುತ್ತಿದ್ದಂತಹ ಮುದ್ದಿನ ಗಿಣಿಯನ್ನು ಕೇವಲ ಅಲ್ಲಾಹನ ಭಯದಿಂದ ತೊರೆದ ಆ ನೈಜ ವಿಶ್ವಾಸಿಯ ದೇವ ಭಕ್ತಿ ಶ್ಲಾಘನೀಯವಲ್ಲವೇ? ಹೌದು, ಅಲ್ಲಾಹನು ಅದನ್ನು ಯೋಗ್ಯವಾಗಿ ಪರಿಗಣಿಸಿ ವಿಪತ್ತಿನಿಂದ ಆತನನ್ನು ಪಾರುಗೊಳಿಸಿದನು.

6. ದುಡಿಯುವ ಕಾರ್ಮಿಕ ವರ್ಗದೊಡನೆ ಮಾಲಿಕನು ಅನುಸರಿಸಬೇಕಾದ ನೀತಿಯನ್ನು ಈ ಕಥೆಯಿಂದ ಗ್ರಹಿಸಬಹುದು. ಆತನ ಶ್ರಮದ ಕೂಲಿಯನ್ನು ಎಲ್ಲಾ ಸಂದರ್ಭ ಗಳಲ್ಲಿಯೂ ಸಂದಾಯ ಮಾಡಬೇಕಾದುದು ಮಾಲಿಕನ ಕರ್ತವ್ಯವಾಗಿದೆ. ಒಂದು ವೇಳೆ ಆ ಹಣ ತನ್ನಲ್ಲೇ ಉಳಿದಿದ್ದರೆ, ಅದನ್ನು ನಿಷ್ಪ್ರಯೋಜಕವಾಗಿರಿಸದೆ ಲಾಭದಾಯಕ ವ್ಯವಹಾರಗಳಲ್ಲಿ ತೊಡಗಿಸಿ ಆ ಮೂಲಕ ದೊರೆಯುವ ಆದಾಯವನ್ನೂ ಆತನಿಗೆ ನೀಡಬೇಕು. ಅದು ಅತ್ಯುತ್ತಮ ಪುಣ್ಯ ಕಾರ್ಯವೆಂದು ಈ ಐತಿಹಾಸಿಕ ಘಟನೆ ನಮ್ಮನ್ನು ನೆನಪಿಸುತ್ತದೆ.

+++

# ಅನ್ಸಾರಿಯ ಅತಿಥಿಗಳು

ಒಂದು ದಿನ ಪ್ರವಾದಿಯವರು(ಸ) ತಮ್ಮ ಮನೆಯಿಂದ ಹೊರಟರು. ದಾರಿಯಲ್ಲಿ ಉಮರ್(ರ) ಮತ್ತು ಅಬೂಬಕರ್‌ರನ್ನು(ರ) ಭೇಟಿಯಾದರು. "ಈ ವೇಳೆ ನೀವಿಬ್ಬರೂ ಮನೆಯಿಂದ ಹೊರಟು ಬರಲು ಕಾರಣವೇನು?' ಎಂದು ಪ್ರವಾದಿಯವರು(ಸ) ಅವರೊಡನೆ ವಿಚಾರಿಸಿದರು. "ಪ್ರವಾದಿಗಳೇ! ಹಸಿವೆಯಿಂದ" ಎಂದು ಅವರು ಉತ್ತರಿಸಿದರು. "ನನ್ನ ಆತ್ಮವು ಯಾರ ಹಸ್ತದಲ್ಲಿದೆಯೋ ಆತನಾಣೆ! ನೀವು ಹೊರಟ ಅದೇ ಕಾರಣದಿಂದ ನಾನೂ ಬಂದಿದ್ದೇನೆ, ಆಗಲಿ. ನೀವು ಬನ್ನಿ" ಎನ್ನುತ್ತಾ ಪ್ರವಾದಿಯವರು(ಸ) ಅವರ ಜತೆ ಸಾಗಿದರು.

ಮೂವರೂ ಓರ್ವ ಅನ್ಸಾರಿಯ ಮನೆಗೆ ಹೋದರು. ಆಗ ಅವರು ಮನೆಯಲ್ಲಿರಲಿಲ್ಲ. ಅವರ ಪತ್ನಿಯು ಪ್ರವಾದಿವರ್ಯರನ್ನು(ಸ) ಕಂಡಾಗ ಬನ್ನಿ, ಸುಸ್ವಾಗತ ಎಂದು ಹೇಳಿ ಅವರನ್ನು ಆದರದಿಂದ ಬರಮಾಡಿಕೊಂಡರು. "ಮನೆಯ ಯಜಮಾನರು ಎಲ್ಲಿ ಹೋದರು" ಪ್ರವಾದಿಯವರು(ಸ) ಆ ಮಹಿಳೆಯೊಡನೆ ವಿಚಾರಿಸಿದರು.

"ಅವರು ನಮಗೆ ಕುಡಿಯುವ ನೀರು ತರಲಿಕ್ಕಾಗಿ ಹೋಗಿದ್ದಾರೆ." ಪ್ರವಾದಿ ವರ್ಯರ(ಸ) ಪ್ರಶ್ನೆಗೆ ಆ ಮನೆಯೊಡತಿ ಉತ್ತರಿಸಿದರು.

ಸ್ವಲ್ಪ ಸಮಯದ ಬಳಿಕ ಆ 'ಅನ್ಸಾರಿ' ಮರಳಿ ಬಂದರು. ಪ್ರವಾದಿ(ಸ) ಮತ್ತು ಸಂಗಡಿಗರನ್ನು ನೋಡಿದಾಗ, "ಅಲ್ಲಾಹನಿಗೆ ಸ್ತುತಿ, ಇಂದು ನನಗೆ ಲಭಿಸಿರುವುದಕ್ಕಿಂತ ಉತ್ತಮ ಅತಿಥಿಗಳು ಬೇರೆ ಯಾರಿಗೂ ಲಭಿಸಿಲ್ಲ" ಎಂದು ಹರ್ಷಾತಿರೇಕದಿಂದ ಅವರು ಉದ್ಗರಿಸಿದರು. ತಕ್ಷಣ ತಮ್ಮ ತೋಟದಿಂದ ಒಂದು ಖರ್ಜೂರದ ಗೊನೆಯನ್ನು ತಂದು ಪ್ರೀತಿಪೂರ್ವಕ ಅತಿಥಿಗಳ ಮುಂದಿರಿಸಿ ಹೀಗೆ ಬಿನ್ನವಿಸಿದರು: "ಅದರಲ್ಲಿ ಬಲಿಯದ, ಬಲಿತ ಮತ್ತು ಮಾಗಿದ ಖರ್ಜೂರಗಳಿವೆ. ದಯವಿಟ್ಟು ತೆಗೆದು ಕೊಳ್ಳಿರಿ."

ತರುವಾಯ ಅವರು ಆಡನ್ನು ಕೊಯ್ಯುವುದಕ್ಕಾಗಿ ಚಾಕು ತೆಗೆದರು. ಅವರ ಉತ್ಸಾಹವನ್ನು ನೋಡಿ ಪ್ರವಾದಿವರ್ಯರು(ಸ), "ಹಾಲು ನೀಡುವ ಆಡನ್ನು ಕಡಿಯ ಬೇಡಿರಿ" ಎಂದು ಸೂಚಿಸಿದರು. ತಕ್ಷಣ ಬೇರೊಂದು ಆಡನ್ನು ಕಡಿದು ಉತ್ತಮವಾಗಿ ಪಾಕ ಮಾಡಿ ಪ್ರವಾದಿಯವರ(ಸ) ಮುಂದೆ ತಂದಿಟ್ಟರು. ಹಾಗೆಯೇ ಆ ಮೂವರು ಅತಿಥಿಗಳು ಮಾಂಸ ಮತ್ತು ಖರ್ಜೂರವನ್ನು ಸಾಕಷ್ಟು ತಿಂದರು. ಅವರ ಹಸಿವು-ದಾಹ

ತಣಿಯಿತು. ಆಗ ಪ್ರವಾದಿಯವರು(ಸ) ಸಂಗಡಿಗರೊಡನೆ ಹೇಳಿದರು: ಅಲ್ಲಾಹನಾಣೆ, ಖಂಡಿತವಾಗಿಯೂ ಈ ಅನುಗ್ರಹದ ಕುರಿತು ನಿಮ್ಮೊಡನೆ ಅಂತಿಮ ದಿನ ವಿಚಾರಿಸ ಲಾಗುವುದು. ಹಸಿವೆಯು ನಿಮ್ಮನ್ನು ಮನೆಯಿಂದ ಹೊರಡುವಂತೆ ಮಾಡಿತ್ತು. ತರುವಾಯ ಈ ಸಮೃದ್ಧ ಆಹಾರವೆಂಬ ಅನುಗ್ರಹ ದೊರೆತ ಬಳಿಕ ನೀವು ಮನೆಗೆ ಮರಳುತ್ತಿರುವಿರಿ."

(ಮುಸ್ಲಿಮ್)

**ಟಿಪ್ಪಣಿಗಳು:**

ಪ್ರವಾದಿ(ಸ) ಮತ್ತು ಸಂಗಾತಿಗಳು ಒಂದೊಮ್ಮೆ ಅನುಭವಿಸಿದ್ದ ದಾರಿದ್ರ್ಯದ ಸ್ಪಷ್ಟ ಚಿತ್ರಣವನ್ನು ಈ ಕಥೆಯಿಂದ ನಾವು ಗ್ರಹಿಸಬಹುದು. ವಿವಿಧ ಮೂಲಗಳಿಂದ ಹಣದ ರಾಶಿ ಬಂದು ಸೇರುತ್ತಿದ್ದ ಪ್ರವಾದಿಯವರೂ(ಸ) ಶ್ರೀಮಂತ ವ್ಯಾಪಾರಿಯಾಗಿದ್ದ ಅಬೂಬಕರ್‌ರೂ(ರ) ಆರ್ಥಿಕ ಕೊರತೆಯಿಲ್ಲದೆ ಬಾಳುತ್ತಿದ್ದ ಉಮರ್‌ರೂ(ರ) ತಮ್ಮ ಬಳಿಯಿದ್ದ ಸಕಲ ಸಂಪತ್ತು ಮತ್ತು ಶ್ರಮವನ್ನು ಇಸ್ಲಾಮಿನ ಹಾದಿಯಲ್ಲಿ ವ್ಯಯಿಸಿದ್ದರು. ತನ್ಮೂಲಕ ಅವರು ಹಸಿವು ತಣಿಸಲು ಗತಿಯಿಲ್ಲದೆ ಕಷ್ಟಪಡುವ ದೃಶ್ಯವನ್ನು ನಾವಿಲ್ಲಿ ನೋಡುತ್ತಿದ್ದೇವೆ. ತಮ್ಮ ಕೈಯಲ್ಲಿರುವ ಹಣವನ್ನು ಖರ್ಚು ಮಾಡಿದರೆ ನಾವು ನಿತ್ಯ ಬಡವರಾಗಬೇಕಾದೀತೆಂಬ ಅಂಜಿಕೆ ಅವರಿಗೆ ಕಿಂಚಿತ್ತೂ ಇರಲಿಲ್ಲ. ಅಲ್ಲಾಹನ ಸಂಪ್ರೀತಿಗಾಗಿ ಜೀವನದ ಸರ್ವಸ್ವವನ್ನೂ ತೊರೆಯಲು ಅವರು ಸದಾ ಸಿದ್ಧರಿದ್ದರು. ಬಡತನವನ್ನು ಇಸ್ಲಾಮಿನ ಹಾದಿಗೆ ಅಡ್ಡಿಯೆಂದು ಅವರು ಭಾವಿಸಿರಲಿಲ್ಲ. ಪ್ರವಾದಿವರ್ಯರು(ಸ) ಬಡತನಕ್ಕಿಂತ ಹೆಚ್ಚಾಗಿ ಲೌಕಿಕ ಸುಖ ಭೋಗಗಳಿಗೆ ಅಂಜುತ್ತಿದ್ದರು. ಬಹಳ ಎಚ್ಚರಿಕೆ ಮತ್ತು ಜಾಗ್ರತೆಯಿಂದ ಅದನ್ನು ವ್ಯವಹರಿಸಬೇಕೆಂದು ತಾಕೀತು ನೀಡಿದ್ದರು. ಅನೇಕ ಪ್ರವಾದಿ ವಚನಗಳಲ್ಲಿ ಈ ವಿಷಯವನ್ನು ಸ್ಪಷ್ಟ ಪಡಿಸಲಾಗಿದೆ. ಮುಸ್ಲಿಮರು ಅಧಿಕ ಸಂಖ್ಯೆಯಲ್ಲಿದ್ದರೂ ಮಳೆ ನೀರಿನ ನೊರೆಯಂತೆ ದುರ್ಬಲ ಸಮುದಾಯವಾಗಿ ಅಧಃ ಪತನಗೊಳ್ಳ ಬಹುದಾದ ಎರಡು ಕಾರಣಗಳನ್ನು ಪ್ರವಾದಿಯವರು(ಸ) ತಿಳಿಸಿದ್ದಾರೆ. 1. ಲೌಕಿಕ ಮೋಹ 2. ಮರಣದ ಭೀತಿ. ಸೂಕ್ಷ್ಮವಾಗಿ ಪರಿಶೀಲಿಸಿದರೆ, ಇಂದು ಮುಸ್ಲಿಮರಿಗೆ ಇಸ್ಲಾಮಿನ ಹಾದಿಯಲ್ಲಿರುವ ಚಟುವಟಿಕೆಗಳಿಗೆ ಅವೆರಡೂ ಅಡ್ಡಿಯಾಗಿವೆಯೆಂದು ಗ್ರಹಿಸಬಹುದು.

ಪ್ರವಾದಿ(ಸ) ಮತ್ತು ಸಂಗಾತಿಗಳ ಇಂತಹ ಮಾದರಿಯಂತೆ ಮುಸ್ಲಿಮರು ತಮ್ಮ ಪ್ರಾಣ ಮತ್ತು ಸಂಪತ್ತನ್ನು ಇಸ್ಲಾಮಿಗಾಗಿ ತ್ಯಾಗ ಮಾಡಲೂ ಸಿದ್ಧರಿದ್ದಾರೆಯೇ? ಹಾಗಿದ್ದರೆ ವಿಜಯ ಖಚಿತ.

+++

# ಕಅಬ್‌ರ ಪಶ್ಚಾತ್ತಾಪ

ಹಿಜರಿ 9ನೆಯ ವರ್ಷದಲ್ಲಿ 'ತಬೂಕ್' ಯುದ್ಧ ನಡೆಯಿತು.[1] ಕಅಬ್ ಬಿನ್ ಮಾಲಿಕ್(ರ) ಅದರಲ್ಲಿ ಭಾಗವಹಿಸಲಿಲ್ಲ. ಆದ್ದರಿಂದ ಹಲವು ಶೋಚನೀಯ ಪರಿಣಾಮಗಳನ್ನು ಅವರು ಅನುಭವಿಸಬೇಕಾಯಿತು. ಆ ದುರಂತ ಕಥೆಯನ್ನು ಅವರು ಸ್ವತಃ ವಿವರಿಸುತ್ತಿದ್ದಾರೆ:

ಪ್ರವಾದಿವರ್ಯರ(ಸ) ಉಪಸ್ಥಿತಿಯಲ್ಲಿ ನಡೆದ ಎಲ್ಲ ಯುದ್ಧಗಳಲ್ಲಿಯೂ ನಾನು ಭಾಗವಹಿಸಿದ್ದೆ, ತಬೂಕ್‌ನ ಹೊರತು. ಬದ್ರ್‌ನಲ್ಲಿ[2] ನಾನು ಭಾಗವಹಿಸಿರಲಿಲ್ಲ. ಆದರೆ ಅಂದು ಅದು ಖಂಡನಾರ್ಹ ವಿಷಯವಾಗಿರಲಿಲ್ಲ. ಏಕೆಂದರೆ, ಪ್ರವಾದಿ(ಸ) ಮತ್ತು ಮುಸ್ಲಿಮರು ಕುರೈಶರ ವ್ಯಾಪಾರೀ ತಂಡವನ್ನು ಗುರಿಯಾಗಿಟ್ಟು ಹೊರಟಿದ್ದರು.[3] ಅಲ್ಲಾಹನು ಅವರನ್ನು ಮತ್ತು ವೈರಿಗಳನ್ನು ಹಿಂದೆ ಯಾರೂ ಊಹಿಸಿಲ್ಲದ ಸ್ಥಳದಲ್ಲಿ ಸಂಘರ್ಷಿಸುವಂತೆ ಮಾಡಿದನು. ಆ ಪ್ರಕಾರ ಬದ್ರ್ ಯುದ್ಧ ನಡೆಯಿತು.

ಜನರು ಇಸ್ಲಾಮೀ ವಿಶ್ವಾಸವನ್ನು ಪುನಃ ದೃಢೀಕರಿಸಿದ 'ಅಕಬಾ' ಒಪ್ಪಂದದಲ್ಲಿ[4] ನಾನು ಪಾಲ್ಗೊಂಡಿದ್ದೆ. ಬದ್ರ್ ಯುದ್ಧವು ಸಾಮಾನ್ಯವಾಗಿ ಜನರ ಮಧ್ಯೆ ಪ್ರಸಿದ್ಧವಾಗಿದ್ದರೂ ನಾನು ಅಕಬಾ ಒಪ್ಪಂದಕ್ಕೆ ಪ್ರಾಮುಖ್ಯತೆ ನೀಡಿದ್ದೆ.

ತಬೂಕ್ ಯುದ್ಧದ ಸಂದರ್ಭದಲ್ಲಿದ್ದಂತಹ ಸಾಮರ್ಥ್ಯ ಮತ್ತು ಸೌಲಭ್ಯ ನನಗೆ ಅದಕ್ಕಿಂತ ಮುಂಚೆ ಇರಲಿಲ್ಲ. ಅಂದು ನನ್ನ ಬಳಿ ಎರಡು ಒಂಟೆಗಳಿದ್ದುವು.

---

1. ಯುದ್ಧಕ್ಕೆ ಹೊರಟ ಬಳಿಕ ಒಂದು ವೇಳೆ ವೈರಿಗಳೊಂದಿಗೆ ಸಂಘರ್ಷಿಸದಿದ್ದರೂ ಇಸ್ಲಾಮೀ ಇತಿಹಾಸಗಾರರು ಅದನ್ನು ಯುದ್ಧವೆಂದೇ ಪರಿಗಣಿಸುತ್ತಾರೆ.
2. ಹಿಜರಿ 2ನೆಯ ವರ್ಷ ನಡೆದ ಯುದ್ಧ.
3. ಇದು ಮುಸ್ಲಿಮರನ್ನು ನಾಶ ಪಡಿಸ ಬಯಸಿದ ವೈರಿಗಳ ಆರ್ಥಿಕ ಪೂರ್ವ ಸಿದ್ಧತೆಗಳನ್ನು ಭಗ್ನಗೊಳಿಸುವ ಹೋರಾಟ ತಂತ್ರವಾಗಿತ್ತು.
4. ಪ್ರವಾದಿವರ್ಯರಿಗೆ(ಸ) ಪ್ರವಾದಿತ್ವ ಪದವಿ ದೊರೆತ 13ನೆಯ ವರ್ಷದಲ್ಲಿ ಪ್ರವಾದಿ(ಸ) ಮತ್ತು 73 ಮದೀನಾ ನಿವಾಸಿಗಳೊಂದಿಗೆ ಮಕ್ಕಾದ ಅಕಬಾ ಎಂಬ ಸ್ಥಳದಲ್ಲಿ ನಡೆದ ಒಪ್ಪಂದ.

ಸಾಮಾನ್ಯವಾಗಿ ಪ್ರವಾದಿವರ್ಯರು(ಸ) ಯುದ್ಧದ ಸಂದರ್ಭಗಳಲ್ಲಿ ಯುದ್ಧದ ಸ್ಥಳವನ್ನು ಗುಪ್ತವಾಗಿರಿಸುತ್ತಿದ್ದರು.[5] ಬೇಸಿಗೆ ಕಾಲವು ಅದರ ಗರಿಷ್ಠ ತಾಪಕ್ಕೆ ತಲಪಿದ ಸಂದರ್ಭ, ಪ್ರವಾದಿವರ್ಯರು(ಸ) ತಬೂಕ್ ಯುದ್ಧದ ಸಿದ್ಧತೆಗೆ ತೊಡಗಿದರು. ಅದರಲ್ಲಿ ಭಾಗವಹಿಸಲು ಮುಸ್ಲಿಮರು ಬಹುಸಂಖ್ಯೆಯಲ್ಲಿ ಸಿದ್ಧರಾಗಿದ್ದರು. ಅವರ ಯಾದಿಯನ್ನು ತಯಾರಿಸುವುದು ಬಹಳ ಕಷ್ಟವಾಗಿತ್ತು. ಮಧ್ಯದಲ್ಲಿ ಯಾರ ಹೆಸರಾದರೂ ಬಿಟ್ಟು ಹೋದರೆ ಅದು ಯಾರಿಗೂ ತಿಳಿಯುತ್ತಿರಲಿಲ್ಲ. ಅದಕ್ಕೆ ದಿವ್ಯವಾಣಿಯೇ (ವಹ್ಯ್) ಬರಬೇಕು. ತಬೂಕ್‌ನ ಹಾದಿಯು ಬಹಳ ದೀರ್ಘವಾಗಿತ್ತು. ಆದ್ದರಿಂದ, ಪ್ರವಾದಿಯವರು(ಸ) ಅವಶ್ಯಕ ಪೂರ್ವ ತಯಾರಿ ನಡೆಸುವಂತೆ ಆದೇಶಿಸಿದರು. ತಬೂಕ್‌ಗೆ ಹೋಗುವುದೆಂದು ಮುಂಚಿತವಾಗಿಯೇ ತಿಳಿಸಿದರು.

ಹಣ್ಣು ಹಂಪಲುಗಳ ಕೊಯ್ಲಿನ ಸಂದರ್ಭ. ನಾನು ಯುದ್ಧದ ವಿಷಯವನ್ನು ಮರೆತು ಕೊಯ್ಲಿನಲ್ಲಿ ನಿರತನಾದೆ. ಪ್ರವಾದಿ(ಸ) ಮತ್ತು ಮುಸ್ಲಿಮರು ಯುದ್ಧ ಸನ್ನಾಹದಲ್ಲಿ ತಲ್ಲೀನರಾಗಿದ್ದರು. ಬೆಳಗ್ಗೆ ಮನೆಯಿಂದ ಹೊರಡುವಾಗ ಯುದ್ಧಕ್ಕೆ ಬೇಕಾದ ಸಿದ್ಧತೆಗಳನ್ನು ನಡೆಸಬೇಕೆಂದು ಭಾವಿಸುತ್ತಿದ್ದೆ. ಆದರೆ ಮನೆಗೆ ಮರಳಿದ ಬಳಿಕ ಸುಸ್ತಾಗಿ ಬಿಡುತ್ತಿತ್ತು. ನನಗೆ ಯಾವ ಕ್ಷಣದಲ್ಲಿ ಬೇಕಾದರೂ ಯುದ್ಧಕ್ಕೆ ಹೊರಡುವ ಸಾಮರ್ಥ್ಯವಿದೆಯಲ್ಲವೇ ಎಂದು ಸಮಾಧಾನಪಡುತ್ತಿದ್ದೆ. ದಿನಗಳೆದಂತೆ ಬಹಳ ತರಾತುರಿಯಿಂದ ಯುದ್ಧಕ್ಕೆ ತಯಾರಿ ನಡೆಸುತ್ತಿದ್ದರು. ಮದೀನಾದಲ್ಲಿ ಯುದ್ಧ ಸಿದ್ಧತೆಯ ಬಿರುಸು. ನಾನು ಆಗಲೂ ಉದಾಸೀನ ತೋರಿಸಿದೆ. ಪ್ರವಾದಿಯವರ(ಸ) ಅನುಯಾಯಿಗಳು ಯುದ್ಧಕ್ಕೆ ಸಜ್ಜಾದರು. ಆದರೂ ನನ್ನ ಮನಸ್ಸು ಡೋಲಾಯ ಮಾನವಾಗಿತ್ತು. ನಾನೇನು ಮಾಡಲಿ? ನನಗೆ ಒಂದು ದೃಢ ನಿರ್ಧಾರ ಕೈಗೊಳ್ಳಲು ಸಾಧ್ಯವಾಗುತ್ತಿಲ್ಲ. ಅದೋ ಸೇನೆಯು ಮದೀನಾದಿಂದ ಹೊರಟಿದೆ. ಆದರೂ ನನಗೆ ಸಿದ್ಧನಾಗಲು ಸಾಧ್ಯವಾಗಲಿಲ್ಲ. ಪ್ರವಾದಿ(ಸ) ಮತ್ತು ಸೇನೆಯು ಹೊರಟಿದೆ. ಅವರು ತಬೂಕ್‌ಗೆ ತಲಪುವುದಕ್ಕಿಂತ ಮುಂಚೆ ಅವರ ಜತೆ ಸೇರಬೇಕೆಂದು ನಾನು ಮನದಲ್ಲಿ ಭಾವಿಸಿದೆ. ನನ್ನಲ್ಲಿ ಉತ್ತಮ ಕುದುರೆಯಿತ್ತು. ಆದ್ದರಿಂದ ನನಗೆ ವೇಗವಾಗಿ ಹೋಗಲು ಅಡ್ಡಿಯಿರಲಿಲ್ಲ. ಒಂದು ವೇಳೆ ಹಾಗೆ ನಾನು ಮಾಡಿದ್ದರೂ ಚಿಂತಿರಲಿಲ್ಲ! ಆದರೆ ದುರದೃಷ್ಟವಶಾತ್, ನಾನು ಅಸಡ್ಡೆಯಿಂದ ಹಾಗೇನೂ ಮಾಡಲಿಲ್ಲ. ಪ್ರವಾದಿ(ಸ) ಮತ್ತು ಸಂಗಾತಿಗಳು ಹೋದ ಬಳಿಕ ಅಲ್ಲಿ ಉಳಿದಿದ್ದ ಜನರೊಡನೆ ಮಾತಾಡುವಾಗ ನನ್ನ ಮನಸ್ಸು ನೋಯುತ್ತಿತ್ತು. ಕೆಲವು ಕಪಟವಿಶ್ವಾಸಿಗಳು ಮತ್ತು ಅಲ್ಲಾಹನು ವಿನಾಯಿತಿ

5. ವೈರಿಗಳಿಗೆ ಸುಳಿವು ದೊರೆಯದಿರಲಿಕ್ಕಾಗಿ ಮತ್ತು ತಮ್ಮ ಅನುಯಾಯಿಗಳ ಧೈರ್ಯ ಗುಂದದಿರಲಿಕ್ಕಾಗಿ ಪ್ರವಾದಿಯವರು(ಸ) ಹಾಗೆ ಮಾಡುತ್ತಿದ್ದರು. ಯುದ್ಧವು ಒಂದು ತಂತ್ರವೆಂದೂ ಅವರು ಹೇಳಿದ್ದಾರೆ.

ನೀಡಿದ ಕೆಲವು ದುರ್ಬಲರು ಮಾತ್ರ ಮದೀನಾದಲ್ಲಿ ಉಳಿದಿದ್ದರು. ಅಲ್ಲಿ ಯಾವನೇ ಒಬ್ಬ ಮಾದರಿ ವ್ಯಕ್ತಿ ನನಗೆ ಕಾಣಸಿಗಲಿಲ್ಲ.

ತಬೂಕ್‌ಗೆ ತಲಪುವ ತನಕ ಪ್ರವಾದಿಯವರು(ಸ) ನನ್ನ ಕುರಿತು ಚಕಾರ ವೆತ್ತಿರಲಿಲ್ಲವಂತೆ. ಅಲ್ಲಿಗೆ ತಲಪಿದ ಬಳಿಕ ಅನುಯಾಯಿಗಳೊಡನೆ, "ನಮ್ಮ ಕಲಬ್ ಬಿನ್ ಮಾಲಿಕ್‌ರಿಗೆ ಏನಾಯಿತು?" ಎಂದು ವಿಚಾರಿಸಿದರು. ಆಗ ಬನೂ ಸಲ್ಮಾ ಗೋತ್ರದ ಓರ್ವರು, "ಪ್ರವಾದಿಗಳೇ, ಅವರು ತಮ್ಮ ಸಂಪತ್ತಿನಲ್ಲಿ ಮೈಮರೆತಿದ್ದಾರೆ" ಎಂದು ಹೇಳಿದರು. ಅದಕ್ಕೆ ಮುಆದ್ ಬಿನ್ ಜಬಲ್‌ರು(ರ)" ನೀವು ಬಹಳ ಕೆಟ್ಟ ಮಾತು ಹೇಳಿದಿರಿ" ಎಂದು ಉತ್ತರಿಸಿದರು. ತರುವಾಯ ಮುಆದ್(ರ) ಪ್ರವಾದಿಯವರೊಡನೆ(ಸ) ಹೀಗೆಂದರು: "ದೇವ ಸಂದೇಶವಾಹಕರೇ! ಅಲ್ಲಾಹನಾಣೆ! ಈ ತನಕ ನಾವು ಅವರಿಂದ ಒಳಿತನ್ನು ಮಾತ್ರ ಅನುಭವಿಸಿದ್ದೇವೆ." ಇಬ್ಬರ ಅಭಿಪ್ರಾಯವನ್ನು ಕೇಳಿದ ಬಳಿಕ ಪ್ರವಾದಿ ಯವರು(ಸ) ಮೌನವಹಿಸಿದರು. ಪ್ರವಾದಿವರ್ಯರು(ಸ) ಮದೀನಾದಿಂದ ಮರಳಿದರೆಂಬ ಸಮಾಚಾರ ತಿಳಿಯಿತು. ಅದರಿಂದ ನನ್ನ ಬೇಗುದಿ ಹೆಚ್ಚಲಾರಂಭಿಸಿತು. ಪ್ರವಾದಿಯವರ(ಸ) ಅಸಂತೃಪ್ತಿಯಿಂದ ಪಾರಾಗುವ ಕುರಿತು ಚಿಂತಿಸಿದೆ. ಅದಕ್ಕಾಗಿ ಮನದಲ್ಲಿ ಕೆಲವು ಸುಳ್ಳು ನೆಪಗಳನ್ನು ಪೋಣಿಸಲಾರಂಭಿಸಿದೆ. ಆ ಕುರಿತು ಕುಟುಂಬದ ಹಿರಿಯರೊಡನೆ ಸಮಾಲೋಚಿಸಿದೆ. ಆದರೆ, ಪ್ರವಾದಿಯವರ(ಸ) ಆಗಮನ ಸಮೀಪಿಸಿದೆಯೆಂದು ತಿಳಿದ ಬಳಿಕ ನನ್ನ ಎಲ್ಲ ದುಷ್ಟ ಚಿಂತನೆಗಳೂ ಮಾಯವಾದುವು. ನಾನು ತಪ್ಪಿಸಿಕೊಳ್ಳಲಾರೆನೆಂದು ನನಗೆ ಖಚಿತವಾಯಿತು. ನಾನು ಸತ್ಯವನ್ನೇ ನುಡಿಯುವ ತೀರ್ಮಾನ ಮಾಡಿದೆ.

ಪ್ರವಾದಿ(ಸ) ಮತ್ತು ಅನುಯಾಯಿಗಳು ಮದೀನಾಕ್ಕೆ ಮರಳಿ ಬಂದರು. ಪ್ರವಾದಿಯವರು(ಸ) ಪಯಣದಿಂದ ಮರಳಿದಾಗ ಮೊದಲು ಮಸೀದಿಗೆ ಹೋಗಿ ಎರಡು ರಕಅತ್ ನಮಾಝ್ ಮಾಡುತ್ತಿದ್ದರು. ಆ ಬಳಿಕ ಜನರೊಡನೆ ಮಾತಾಡುತ್ತಿದ್ದರು. ಅವರು ರೂಢಿಯಂತೆ ಅಲ್ಲಿ ಎರಡು ರಕಅತ್ ನಮಾಝ್ ನಿರ್ವಹಿಸಿ ಜನರೊಡನೆ ಮಾತಾಡಲಿಕ್ಕಾಗಿ ನಿರ್ದಿಷ್ಟ ಸ್ಥಳದಲ್ಲಿ ಕುಳಿತರು. ತಬೂಕ್‌ಗೆ ಹೋಗದೆ ಮದೀನಾದಲ್ಲಿ ಉಳಿದ ಒಬ್ಬೊಬ್ಬರೇ ಪ್ರವಾದಿಯವರ(ಸ) ಬಳಿ ಬಂದು ವಿವಿಧ ಕಾರಣಗಳನ್ನು ತಿಳಿಸುತ್ತಿದ್ದರು. ಅಂತಹ 70ಕ್ಕೂ ಅಧಿಕ ಜನರಿದ್ದರು. ಪ್ರವಾದಿಯವರು(ಸ) ಅವರು ಹೇಳಿದ ಕಾರಣಗಳನ್ನು ಒಪ್ಪಿ ಅವರಿಂದ 'ಬೈಅತ್' (ಪ್ರವಾದಿಯವರ(ಸ) ವಿಧೇಯತೆಯ ಪ್ರತಿಜ್ಞೆ) ಮಾಡಿಸಿದರು. ಅವರಿಗಾಗಿ ಅಲ್ಲಾಹನೊಡನೆ ಕ್ಷಮೆಕೋರಿ, ಅವರ ಗುಪ್ತ ವಿಷಯಗಳನ್ನು ಅಲ್ಲಾಹನಿಗೆ ಬಿಟ್ಟರು.

ಹಾಗೆಯೇ ನನ್ನ ಸರದಿ ಬಂತು. ನಾನು ಪ್ರವಾದಿಯವರ(ಸ) ಮುಂದೆ ನಿಂತು ಸಲಾಮ್ ಹೇಳಿದೆ. ಅವರು ಮುಗುಳ್ನಗುತ್ತಾ "ಹತ್ತಿರ ಬನ್ನಿ" ಎಂದು ಹೇಳಿದರು. ನಾನು

ಹೋಗಿ ಅವರ ಸನಿಹದಲ್ಲಿ ಕುಳಿತೆ. "ನೀವು ಯುದ್ಧಕ್ಕೆ ಬಾರದಿರಲು ಕಾರಣವೇನು? ವಾಹನ ವಿರಲಿಲ್ಲವೇ?" ಎಂದು ಪ್ರವಾದಿ(ಸ) ವಿಚಾರಿಸಿದರು. ನಾನು ಪ್ರವಾದಿಯವರ(ಸ) ಮುಂದೆ ವಿನಯದಿಂದ ಬಿನ್ನವಿಸಿದೆ: "ದೇವ ಪ್ರವಾದಿಗಳೇ! ಅಲ್ಲಾಹನಾಣೆ, ನಿಮ್ಮ ಹೊರತು ಬೇರೆ ಯಾರ ಮುಂದೆ ಆಗಿದ್ದರೂ ನಾನು ಏನಾದರೂ ನೆಪ ಹೇಳಿ ಅವರ ಅಸಂತೃಪ್ತಿಯಿಂದ ಪಾರಾಗಲು ನನಗೆ ಸಾಧ್ಯವಿತ್ತು. ನಾನು ಉತ್ತಮ ವಾಗ್ಮಿಯಾಗಿದ್ದೇನೆ. ಇಲ್ಲಿ ಏನಾದರೂ ಸುಳ್ಳು ಹೇಳಿ ತತ್ಕಾಲಕ್ಕೆ ನಿಮ್ಮನ್ನು ನಾನು ಸಂತೃಪ್ತಗೊಳಿಸಬಹುದು. ಆದರೆ, ಮುಂದೆ ಅಲ್ಲಾಹನು ನನ್ನ ಕುರಿತು ನಿಮ್ಮಲ್ಲಿ ಅಸಂತೃಪ್ತಿ ಮೂಡಿಸಬಹುದೆಂದು ನಾನು ಭಯಪಡುತ್ತೇನೆ. ನಾನು ನಿಮ್ಮೊಡನೆ ಸತ್ಯ ಹೇಳಿದರೆ ತತ್ಕಾಲಕ್ಕೆ ನೀವು ನನ್ನನ್ನು ದ್ವೇಷಿಸಬಹುದು. ಆದರೆ ನಾನು ಅಲ್ಲಾಹನ ಅನುಗ್ರಹವನ್ನು ಬಯಸುತ್ತೇನೆ. ಅಲ್ಲಾಹನಾಣೆ! ನನಗೆ ಯಾವ ಅಡ್ಡಿಯೂ ಇರಲಿಲ್ಲ. ನನಗೆ ಉತ್ತಮ ಸಾಮರ್ಥ್ಯ ಮತ್ತು ಸೌಲಭ್ಯವಿತ್ತು." ನಾನು ಮಾತು ಮುಗಿಸಿದಾಗ ಪ್ರವಾದಿ(ಸ) ಹೇಳಿದರು: "ಸರಿ, ನೀವು ಸತ್ಯ ಹೇಳಿದ್ದೀರಿ. ನೀವು ಹೋಗ ಬಹುದು. ನಿಮ್ಮ ವಿಷಯವನ್ನು ಅಲ್ಲಾಹನೇ ತೀರ್ಮಾನಿಸಲಿ."

ನಾನು ಅಲ್ಲಿಂದ ಹೊರಟೆ. ಬನೂಸಲ್ಮಾ ಗೋತ್ರದ ಕೆಲವು ಮಿತ್ರರು ನನ್ನನ್ನು ಸುತ್ತುವರಿದು ಹೀಗೆಂದರು: "ಅಲ್ಲಾಹನಾಣೆ! ನೀವು ಈ ಹಿಂದೆ ಯಾವ ತಪ್ಪನ್ನೂ ಮಾಡಿಲ್ಲ. ಯುದ್ಧದಲ್ಲಿ ಭಾಗವಹಿಸದಿದ್ದ ಇತರರಂತೆ ಪ್ರವಾದಿಯೊಡನೆ(ಸ) ಏನಾದರೂ ನೆಪ ಹೇಳಿ ನಿಮಗೆ ಪಾರಾಗ ಬಹುದಿತ್ತಲ್ಲವೇ? ನಿಮ್ಮ ಪಾಪ ಪರಿಹಾರಕ್ಕೆ ಪ್ರವಾದಿವರ್ಯರ(ಸ) ಪ್ರಾರ್ಥನೆ ಪರ್ಯಾಪ್ತವಾಗುತ್ತಿತ್ತಲ್ಲವೇ?" ಅವರ ವಿಮರ್ಶೆಗಳನ್ನು ಕೇಳಿ ನನಗೆ, ನಾನು ಪುನಃ ಪ್ರವಾದಿಯವರ(ಸ) ಬಳಿಗೆ ಹೋಗಿ ನನ್ನ ಹಿಂದಿನ ಹೇಳಿಕೆ ಸರಿಯಲ್ಲವೆಂದು ಹೇಳಿ ಬಿಡಲೇ ಎಂದೆನಿಸಿತ್ತು. ಅವರ ವಿಮರ್ಶೆಯ ತೀಕ್ಷ್ಣತೆಯಿಂದ "ಬೇರೆ ಯಾರಿಗಾದರೂ ನನ್ನ ಈ ಅನುಭವವಾಗಿದೆಯೇ?" ಎಂದು ನಾನು ವಿಚಾರಿಸಿದೆ. ಅವರು ಹೇಳಿದರು: "ನಿಮ್ಮಂತೆಯೇ ಇನ್ನಿಬ್ಬರಿದ್ದಾರೆ. ಅವರು ನೀವು ಹೇಳಿದ ಹಾಗೆಯೇ ಹೇಳಿದ್ದಾರೆ." "ಆ ಇಬ್ಬರು ಯಾರು?" ನಾನು ಪ್ರಶ್ನಿಸಿದೆ. "ರಾಬಿಲ್‌ರ ಪುತ್ರ ಮುರಾರ ಮತ್ತು ಉಮಯ್ಯರ ಪುತ್ರ ಹಿಲಾಲ್" ಎಂದು ಅವರು ಉತ್ತರಿಸಿದರು. ಇಬ್ಬರು ಸಜ್ಜನರ ಕುರಿತು ಅವರು ನನಗೆ ತಿಳಿಸಿದರು! ಆ ಇಬ್ಬರೂ ಬದ್ರ್ ಯುದ್ಧದಲ್ಲಿ ಭಾಗವಹಿಸಿದವರಾಗಿದ್ದರು. ಅವರಲ್ಲಿ ಮುಸ್ಲಿಮರಿಗೆ ಮಾದರಿಯಿದೆ. ಆ ಇಬ್ಬರು ಮಿತ್ರರ ಕಥೆ ಕೇಳಿದ ಕೂಡಲೇ ನಾನು ವಿಮರ್ಶಕರಿಂದ ಬೀಳ್ಕೊಂಡೆ.

ನಮ್ಮ ಮೂವರೊಡನೆ ಯಾರೂ ಮಾತಾಡ ಬಾರದೆಂದು ಪ್ರವಾದಿಯವರು(ಸ) ಆಜ್ಞಾಪಿಸಿದ್ದರು. ಜನರು ನಮ್ಮನ್ನು ಬಹಿಷ್ಕರಿಸಿದರು. ಮದೀನಾ ನಗರವು ನಮಗೆ

ಅಪರಿಚಿತ ಪ್ರದೇಶದಂತೆ ಭಾಸವಾಯಿತು. ಇದೇ ಸ್ಥಿತಿಯಲ್ಲಿ ನಾವು 50 ದಿನ ಕಳೆಯ ಬೇಕಾಯಿತು. ಬಹಿಷ್ಕಾರಕ್ಕೆ ಗುರಿಯಾದ ಇನ್ನಿಬ್ಬರೂ ತೀವ್ರ ದುಃಖದಿಂದ ಪ್ರಲಾಪಿಸು ತ್ತಿದ್ದರು. ಅವರು ಆ ವ್ಯಥೆಯಿಂದ ಮನೆಯಲ್ಲಿಯೇ ಕುಳಿತು ದಿನದೂಡಿದರು. ಆ ಪೈಕಿ ನಾನು ಯುವಕನೂ ದೃಢಕಾಯನೂ ಆದುದರಿಂದ ಹೊರಗೆ ಹೋಗಿ ಇತರರ ಜತೆ ನಮಾಝ್‌ನಲ್ಲಿ ಭಾಗವಹಿಸುತ್ತಿದ್ದೆ. ಬೀದಿಗಳಲ್ಲಿ ಸಂಚರಿಸುತ್ತಿದ್ದೆ. ಆದರೆ ಏನಾಶ್ಚರ್ಯ, ನನ್ನೊಡನೆ ಯಾರೂ ಒಂದು ಮಾತನ್ನೂ ಆಡುತ್ತಿರಲಿಲ್ಲ. ನಮಾಝಿನ ಬಳಿಕ ಪ್ರವಾದಿ(ಸ) ಮತ್ತು ಅನುಯಾಯಿಗಳು ಕುಳಿತುಕೊಳ್ಳುವ ಸ್ಥಳಕ್ಕೆ ಹೋಗಿ ನಾನು ಪ್ರವಾದಿಯವರಿಗೆ ಸಲಾಮ್ ಹೇಳಿದೆ. ಮರು ಸಲಾಮ್ ಹೇಳಲು ಪ್ರವಾದಿಯವರ(ಸ) ತುಟಿ ಚಲಿಸುತ್ತಿದೆಯೇ ಎಂದು ಕಾತರದಿಂದ ಗಮನಿಸಿದೆ. ನಾನು ಕೆಲವೊಮ್ಮೆ ಪ್ರವಾದಿಯವರು(ಸ) ಕುಳಿತ ಸ್ಥಳದ ಸಮೀಪದಲ್ಲಿ ನಿಂತು ನಮಾಝ್ ಮಾಡುತ್ತಿದ್ದೆ. ಆಗ ನಾನು ಪ್ರವಾದಿಯವರನ್ನು(ಸ) ಕಡೆಗಣ್ಣಿನಿಂದ ನೋಡುತ್ತಿದ್ದೆ. ನಾನು ನಮಾಝ್‌ನಲ್ಲಿ ತೊಡಗಿದ ಬಳಿಕ ಅವರು ನನ್ನನ್ನು ನೋಡುತ್ತಿದ್ದರು. ನಾನು ಪ್ರವಾದಿಯವರತ್ತ ತಿರುಗಿದರೆ ಅವರು ತಮ್ಮ ನೋಟವನ್ನು ಬೇರೆಡೆಗೆ ತಿರುಗಿಸುತ್ತಿದ್ದರು.

ಈ ಬಹಿಷ್ಕಾರ ಬಹಳ ದೀರ್ಘವಾಯಿತು. ನಾನು ಅಬೂಖತಾದರ ಬಳಿಗೆ ಹೋಗಲು ನಿರ್ಧರಿಸಿದೆ. ಅವರು ನನ್ನ ಚಿಕ್ಕಪ್ಪನ ಪುತ್ರ. ನಾವು ಆತ್ಮೀಯ ಮಿತ್ರರಾಗಿದ್ದೆವು. ನಾನು ತಡೆಗೋಡೆ ಹಾರಿ ಅವರ ತೋಟದೊಳಗೆ ಪ್ರವೇಶಿಸಿದೆ. ಅವರನ್ನು ನೋಡಿದ ಕೂಡಲೇ ಸಲಾಮ್ ಹೇಳಿದೆ. ಅಲ್ಲಾಹನಾಣೆ! ಅವರು ನನಗೆ ಪ್ರತಿಸಲಾಮ್ ಹೇಳಲಿಲ್ಲ! ಗದ್ಗದ ಸ್ವರದಲ್ಲಿ ನಾನು ಹೇಳಿದೆ. "ಅಬೂ ಖತಾದಃ! ಅಲ್ಲಾಹನನ್ನು ಮುಂದಿಟ್ಟು ನಾನು ನಿಮ್ಮೊಡನೆ ಕೇಳುತ್ತಿದ್ದೇನೆ. ನಾನು ಅಲ್ಲಾಹ್ ಮತ್ತು ಆತನ ಪ್ರವಾದಿಯವರನ್ನು ಪ್ರೀತಿಸುತ್ತಿರುವೆ ನೆಂದು ತಿಳಿಯದೇ?" ಅವರು ಮೌನ ಮುರಿಯಲಿಲ್ಲ. ಅಲ್ಲಾಹನ ಸಾಕ್ಷ್ಯವಿರಿಸಿ ನನ್ನ ಪ್ರಶ್ನೆಯನ್ನು ಪುನರುಚ್ಚರಿಸಿದೆ. ಅದಕ್ಕೂ ಉತ್ತರ ಸಿಗಲಿಲ್ಲ. ಮೂರನೆಯ ಬಾರಿಯೂ ನಾನು ನಡುಗುವ ಸ್ವರದಲ್ಲಿ ಅಲ್ಲಾಹನನ್ನು ಸಾಕ್ಷಿಯಿರಿಸಿ ಕೇಳಿದೆ. "ಅಲ್ಲಾಹ್ ಮತ್ತು ಆತನ ಸಂದೇಶವಾಹಕರೇ ಬಲ್ಲರು." ಇದು ನನ್ನ ಕೊನೆಯ ಪ್ರಶ್ನೆಗೆ ದೊರೆತ ಉತ್ತರ. ನಾನು ತಕ್ಷಣ ಅಲ್ಲಿಂದ ವಾಪಾಸು ಬಂದೆ. ನನ್ನ ಎರಡು ಕಣ್ಣುಗಳಿಂದಲೂ ನೀರು ಸುರಿಯುತ್ತಿತ್ತು.

ಅದೊಂದು ದಿನ ನಾನು ಮದೀನಾದ ಬೀದಿಯಲ್ಲಿ ನಡೆಯುತ್ತಿದ್ದೆ. ಸಿರಿಯಾದ ಕೆಲವು ರೈತರು ಅಲ್ಲಿಗೆ ಬಂದರು. ಆಹಾರ ಧಾನ್ಯಗಳ ಮಾರಾಟಕ್ಕಾಗಿ ಅವರು ಬಂದಿದ್ದರು. "ಕಅಬ್ ಬಿನ್ ಮಾಲಿಕ್ ಯಾರು? ಅವರನ್ನು ನನಗೆ ಸ್ವಲ್ಪ ಪರಿಚಯ ಮಾಡಿಸುತ್ತೀರಾ?" ಎಂದು ಅವರಲ್ಲೊಬ್ಬರು ಕೇಳಿದರು. ಜನರು ಅವರಿಗೆ ನನ್ನನ್ನು ತೋರಿಸಿದರು. ಅವರು

ಮುಗುಳ್ನಗುತ್ತ 'ಗಸ್ಸಾನ್' ರಾಜನ ಸಂದೇಶವೊಂದನ್ನು ನೀಡಿದರು. ನನಗೆ ಅಕ್ಷರಜ್ಞಾನ ವಿದ್ದುದರಿಂದ ನಾನು ಪತ್ರವನ್ನು ಕೂಡಲೇ ಓದಿದೆ. "ನಿಮ್ಮ ನಾಯಕ ನಿಮ್ಮನ್ನು ನಿರ್ಲಕ್ಷಿಸಿರುವರೆಂಬ ಸುದ್ದಿ ದೊರೆತಿದೆ. ನೀವು ಹಾಗೆ ನಿರ್ಲಕ್ಷಿಸಲ್ಪಡುವ ಅಥವಾ ಅಪಮಾನಿಸ ಬೇಕಾದ ವ್ಯಕ್ತಿಯಲ್ಲ. ಆದ್ದರಿಂದ ನಾವು ನಿಮ್ಮನ್ನು ಸ್ವಾಗತಿಸುತ್ತೇವೆ. ಕೂಡಲೇ ಬನ್ನಿರಿ." ಇದು ರಾಜನ ಸಂದೇಶದಲ್ಲಿದ್ದ ಒಕ್ಕಣೆ. ಅದನ್ನು ಓದಿದಾಗ ನನ್ನ ನೊಂದ ಮನಸ್ಸಿನ ಗಾಯಕ್ಕೆ ಬರೆಯೆಳೆದಂತಾಯಿತು. ಇದು ಇನ್ನೊಂದು ಪರೀಕ್ಷೆಯೆಂದು ಮನಗಂಡೆ. ಗಸ್ಸಾನ್ ರಾಜನ ಪತ್ರವನ್ನು ಹರಿದು ಚಿಂದಿ ಮಾಡಿದೆ.

ನಮ್ಮ ಮೇಲೆ ಬಹಿಷ್ಕಾರ ಹೇರಿ 40 ದಿನಗಳಾದುವು. ಆ ಕುರಿತು ಪ್ರವಾದಿ ಯವರಿಗೆ(ಸ) ಅಲ್ಲಾಹನಿಂದ ಯಾವ ಸೂಚನೆಯೂ ದೊರೆಯಲಿಲ್ಲ. ಹೀಗಿರುತ್ತಾ ಪ್ರವಾದಿ ಯವರ(ಸ) ಓರ್ವ ದೂತನು ನನ್ನ ಬಳಿಗೆ ಬಂದನು. "ನೀವು ಪತ್ನಿಯಿಂದ ಬೇರ್ಪಟ್ಟಿರ ಬೇಕೆಂದು ಪ್ರವಾದಿಯವರು(ಸ) ಆಜ್ಞಾಪಿಸಿದ್ದಾರೆ" ಎಂದು ಪ್ರವಾದಿಯವರ(ಸ) ಸಂದೇಶವನ್ನು ತಿಳಿಸಿದನು. "ನಾನೇನು ಮಾಡಬೇಕು? ಪತ್ನಿಗೆ ತಲಾಕ್ ನೀಡಬೇಕೇ?" ಎಂದು ಗದ್ಗದಿತನಾಗಿ, ಕೇಳಿದೆ. "ಬೇಡ, ನೀವು ಅವರಿಂದ ದೂರವಿರಿ. ಅಷ್ಟು ಮಾಡಿದರೆ ಸಾಕು" ಅವರು ಹೇಳಿದರು. ಪ್ರವಾದಿಯವರಿಂದ(ಸ) ಬಂದ ಆ ಆಜ್ಞೆಯನ್ನು ನಾನು ಶಿರಸಾ ಪಾಲಿಸಿದೆ. "ಈ ವಿಷಯದ ಕುರಿತು ಅಲ್ಲಾಹನ ತೀರ್ಮಾನ ಬರುವ ತನಕ ನೀನು ನಿನ್ನ ಕುಟುಂಬ ಸಂಬಂಧಿಕರೊಡನೆ ವಾಸಿಸು!" ಪ್ರವಾದಿಯವರ(ಸ) ಆಜ್ಞೆಯನ್ನು ಜಾರಿಗೊಳಿಸುವ ಉದ್ದೇಶ ದಿಂದ ಪತ್ನಿಗೆ ತಿಳಿಸಿದೆ. ಅಂತೆಯೇ ಆಕೆ ತವರು ಮನೆಗೆ ಹೋದಳು.

ಹಿಲಾಲ್ ಬಿನ್ ಉಮಯ್ಯರಿಗೂ ಇದೇ ರೀತಿಯ ಆಜ್ಞೆ ದೊರೆತಿತ್ತು. ಅವರ ಪತ್ನಿಯು ಪ್ರವಾದಿವರ್ಯರ(ಸ) ಬಳಿ ಹೋಗಿ ಆ ಕುರಿತು ವಿಚಾರಿಸಿದರು. "ದೇವ ಪ್ರವಾದಿಗಳೇ! ಹಿಲಾಲ್ ಓರ್ವ ವಯೋವೃದ್ಧರು. ಅವರಿಗೆ ಯಾರೂ ಪರಿಚಾರಕರಿಲ್ಲ. ಅವರಿಗೆ ಅವಶ್ಯಕ ಉಪಚಾರ ಮಾಡುವುದನ್ನು ನೀವು ನಿಷೇಧಿಸುತ್ತಿರುವಿರಾ?" ಪ್ರವಾದಿ(ಸ) ಹೇಳಿದರು: "ಇಲ್ಲ, ಅದಕ್ಕೆ ಅಡ್ಡಿಯಿಲ್ಲ. ಆದರೆ ನೀವು ಅವರೊಂದಿಗೆ ಸೇರಬಾರದು." ಆ ಮಹಿಳೆ ಹೇಳಿದರು: "ಅಲ್ಲಾಹನಾಣೆ, ಅವರಿಗೆ ಆ ಶಕ್ತಿಯಿಲ್ಲ. ಬಹಿಷ್ಕಾರ ಜಾರಿಯಾದ ಆ ಕ್ಷಣದಿಂದ ಅವರು ಈ ತನಕ ಕಣ್ಣೀರಿಳಿಸುತ್ತಿದ್ದಾರೆ."

ಈ ಸುದ್ದಿ ನನ್ನ ಕುಟುಂಬದ ಕೆಲವರಿಗೆ ತಿಳಿಯಿತು. "ಹಿಲಾಲ್ ಬಿನ್ ಉಮಯ್ಯರು ಪತ್ನಿಗೆ ಪತಿಯ ಜತೆ ಬಾಳುವ ಒಪ್ಪಿಗೆ ದೊರೆತಿದೆಯಲ್ಲವೇ. ನೀವೂ ಆ ಬಗ್ಗೆ ಪ್ರವಾದಿಯವರೊಡನೆ ಕೇಳಿ ನೋಡಿರಿ" ಎಂದು ನನ್ನನ್ನು ಒತ್ತಾಯಿಸಿದರು. ನಾನು ಹೇಳಿದೆ:

"ನಾನೋರ್ವ ಯುವಕ. ನಾನು ಪ್ರವಾದಿಯವರ(ಸ) ಒಪ್ಪಿಗೆ ಕೇಳಿದರೆ ಅವರು ಏನು ಹೇಳುವರೋ ತಿಳಿದಿಲ್ಲ. ಆದ್ದರಿಂದ ಹಾಗೆ ಕೇಳದಿರುವುದೇ ಉತ್ತಮ."

ಹೀಗೆ ಪತ್ನಿಯನ್ನು ಅಗಲಿ ನಾನು 10 ದಿನಗಳನ್ನು ದೂಡಿದೆ. ಬಹಿಷ್ಕಾರ ಜಾರಿಯಾದ 50ನೆಯ ದಿನ ನಾನು ಪ್ರಭಾತ ನಮಾಝ್ ನಿರ್ವಹಿಸಿ ದೇವ ಸ್ಮರಣೆಯಲ್ಲಿ ತಲ್ಲೀನನಾಗಿದ್ದೆ. ನನ್ನ ದುಃಖವು ಅಸಹನೀಯವಾಗಿತ್ತು. ವಿಶಾಲವಾದ ಭೂಮಿಯು ನನ್ನ ಮಟ್ಟಿಗೆ ಇಕ್ಕಟ್ಟಾಗಿತ್ತು. ಆಕಸ್ಮಿಕವಾಗಿ ಬೆಟ್ಟದ ತುದಿಯಿಂದ ಒಂದು ಕೂಗು ಕೇಳಿಸಿತು: "ಕಅಬ್ ಬಿನ್ ಮಾಲಿಕ್! ಸಂತುಷ್ಟರಾಗಿರಿ." ತಕ್ಷಣವೇ ನನ್ನ ಮುಖವು ಅಲ್ಲಾಹನಿಗೆ ಸಾಷ್ಟಾಂಗ ವೆರಗಿ ನೆಲಕ್ಕೆ ತಾಗಿತು. ಆ ಧ್ವನಿಯು ನನ್ನ ಕಿವಿಗೆ ಬಿದ್ದ ಕೂಡಲೇ ನಾನು ಸಂತೋಷಾತಿರೇಕ ದಿಂದ ಮೈಮರೆತೆ.

ನಮ್ಮ ಮೂವರ ಪಶ್ಚಾತ್ತಾಪವನ್ನು ಅಲ್ಲಾಹನು ಸ್ವೀಕರಿಸಿದ ವಾರ್ತೆಯನ್ನು ಪ್ರಭಾತ ನಮಾಝ್ ನಿರ್ವಹಿಸಿದ ಬಳಿಕ ಪ್ರವಾದಿವರ್ಯರು(ಸ) ಸಾರಿದರು. ಆ ಶುಭವಾರ್ತೆಯನ್ನು ನಮಗೆ ಕೂಡಲೇ ತಿಳಿಸಲು ಜನರು ಆತುರದಿಂದ ಓಡಿ ಬರುತ್ತಿದ್ದರು. ಅವರು ಉಳಿದಿಬ್ಬರಿಗೂ ಆ ಶುಭವಾರ್ತೆಯನ್ನು ಕೂಡಲೇ ತಲಪಿಸಿದರು.

ಓರ್ವ ಕುದುರೆ ಸವಾರ ನನ್ನ ಬಳಿಗೆ ಧಾವಿಸಿ ಬಂದರು. ಆದರೆ ಅವನಿಗಿಂತ ವೇಗವಾಗಿ ಆಸಿಮ್ ಗೋತ್ರದ ಓರ್ವ ಮಿತ್ರರು ಓಡಿ ಬಂದು ಬೆಟ್ಟದ ಮೇಲೆ ನಿಂತು ಆ ಸಂತೋಷದ ಸುದ್ದಿಯನ್ನು ಗಟ್ಟಿಯಾಗಿ ಕೂಗಿ ಹೇಳಿದ್ದರು. ಅದೇ ನನಗೆ ಮೊದಲು ಕೇಳಿಸಿತ್ತು. ಅವರು ನನ್ನ ಬಳಿಗೆ ತಲಪಿದಾಗ ನಾನು ನನ್ನ ಎರಡು ಬಟ್ಟೆಗಳನ್ನು ಕಳಚಿ ಅವರಿಗೆ ಕೊಟ್ಟೆ. ಅವುಗಳನ್ನು ನನ್ನ ಕೈಗಳಿಂದಲೇ ಅವರಿಗೆ ತೊಡಿಸಿದೆ. ಅಲ್ಲಾಹನಾಣೆ! ನನ್ನ ಬಳಿ ಬೇರೆ ಹೇಳತಕ್ಕಂತಹ ಬಟ್ಟೆಗಳಿರಲಿಲ್ಲ. ನಾನು ಬೇರೆ ಎರಡು ಬಟ್ಟೆಗಳನ್ನು ಎರವಲು ಪಡೆದು ಧರಿಸಿ ಪ್ರವಾದಿಯವರ(ಸ) ಬಳಿಗೆ ಹೋದೆ. ಅಲ್ಲಾಹನು ನನ್ನ ಪಶ್ಚಾತ್ತಾಪವನ್ನು ಸ್ವೀಕರಿಸಿರುವುದರಿಂದ ದಾರಿಯಲ್ಲಿ ಜನರು ನನ್ನನ್ನು ಸಾಮೂಹಿಕವಾಗಿ ಅಭಿನಂದಿಸುತ್ತಿದ್ದರು.

ನಾನು ಮಸೀದಿಗೆ ಹೋದೆ. ಪ್ರವಾದಿಯವರು(ಸ) ಅನುಯಾಯಿಗಳೊಂದಿಗೆ ಕುಳಿತಿದ್ದರು. ನನ್ನನ್ನು ನೋಡಿದ ಕೂಡಲೇ ತಲ್ಹಾ ಬಿನ್ ಉಬೈದುಲ್ಲಾಹ್ ಮುಂದೆ ಬಂದರು. ನನ್ನ ಕೈ ಕುಲುಕಿ ಸ್ವಾಗತಿಸಿದರು. ಅಲ್ಲಾಹನಾಣೆ! ಮುಹಾಜಿರರಲ್ಲಿ[1] ಬೇರೆ ಯಾರೂ ಹಾಗೆ ಮಾಡಲಿಲ್ಲ.[2] ನಾನು ಪ್ರವಾದಿಯವರ(ಸ) ಬಳಿ ಹೋಗಿ ಸಲಾಮ್

1. ವಲಸೆ ಬಂದ ಮುಸ್ಲಿಮರು.

2. ಈ ಕಾರಣದಿಂದ ಕಅಬ್‌ರಿಗೆ(ರ) ತಲ್ಹಾರೊಡನೆ ಮರಣದ ತನಕ ಅತ್ಯಧಿಕ ಪ್ರೀತಿಯಿತ್ತು.

ಹೇಳಿದೆ. ಪ್ರವಾದಿಯವರ(ಸ) ಮುಖದಲ್ಲಿ ಸಂತೋಷ ಲಾಸ್ಯವಾಡುವುದನ್ನು ನೋಡಿದೆ. ಪ್ರವಾದಿವರ್ಯರಿಗೆ(ಸ) ಸಂತೋಷವಾದಾಗ ಅವರ ಮುಖವು ಚಂದ್ರದಂತೆ ಶೋಭಿಸುತ್ತಿತ್ತು. 'ಈ ಸುದಿನದಿಂದ ನೀನು ಸಂತುಷ್ಟನಾಗು. ನಿನ್ನ ಜೀವನದಲ್ಲಿ ಇಂತಹ ಸಂತೋಷದ ದಿನ ಎಂದೂ ಬಂದಿಲ್ಲ" ಎಂದು ನನ್ನನ್ನು ನೋಡಿದ ಕೂಡಲೇ ಪ್ರವಾದಿಯವರು(ಸ) ಹೇಳಿದರು. ನಾನು ಕೇಳಿದೆ: "ಪ್ರವಾದಿಗಳೇ! ಈ ಸುವಾರ್ತೆ ನಿಮ್ಮ ಸ್ವಂತದ್ದೋ ಅಥವಾ ಅಲ್ಲಾಹನ ವತಿಯಿಂದಲೋ?" ಅವರು, 'ಅಲ್ಲಾಹನ ವತಿಯಿಂದ' ಎಂದು ಹೇಳಿದರು.

ತರುವಾಯ ಪ್ರವಾದಿಯವರ(ಸ) ಬಳಿ ಕುಳಿತು ನಾನು ಹೇಳಿದೆ: "ಅಲ್ಲಾಹನ ಪ್ರವಾದಿಗಳೇ! ನನ್ನ ಸಂಪತ್ತನ್ನು ಸಂಪೂರ್ಣವಾಗಿ ಅಲ್ಲಾಹ್ ಮತ್ತು ಪ್ರವಾದಿವರ್ಯರಿಗಾಗಿ ಮೀಸಲಿಡುವ ನಿರ್ಧಾರ ಮಾಡಿದ್ದೇನೆ.[3] ಅದು ನನ್ನ ಪಶ್ಚಾತ್ತಾಪದ ಒಂದು ಭಾಗವಾಗಿದೆ." ಆಗ ಪ್ರವಾದಿಯವರು(ಸ) ಹೇಳಿದರು: "ನಿನ್ನ ಸಂಪತ್ತಿನ ಸ್ವಲ್ಪಂಶ ನಿನ್ನಲ್ಲೇ ಇರಲಿ. ಅದು ಉತ್ತಮ." ನಾನು ಹೇಳಿದೆ: "ನನ್ನ ಸಮಾಧಿಯ ಪಾಲನ್ನು ನಾನು ಇರಿಸಿ ಕೊಳ್ಳುತ್ತೇನೆ. ಅಲ್ಲಾಹನ ಪ್ರವಾದಿಗಳೇ! ನಾನು ಸತ್ಯ ಹೇಳಿರುವುದರಿಂದ ಅಲ್ಲಾಹನು ನನ್ನನ್ನು ರಕ್ಷಿಸಿದನು. ಆದ್ದರಿಂದ ಇನ್ನು ಮುಂದೆ ನಾನು ಸತ್ಯವನ್ನೇ ಹೇಳುತ್ತೇನೆ. ಸುಳ್ಳು ಹೇಳಲಾರೆ. ಅದು ಕೂಡಾ ನನ್ನ ಪಶ್ಚಾತ್ತಾಪದ ಭಾಗವಾಗಿದೆ. ಪ್ರವಾದಿಯವರೊಡನೆ ಸತ್ಯ ಹೇಳಿದ್ದಕ್ಕಾಗಿ ನನ್ನನ್ನು ಅನುಗ್ರಹಿಸಿರುವಂತೆ ಅಲ್ಲಾಹನು ಬೇರೆ ಯಾರನ್ನು ಅನುಗ್ರಹಿಸಿದ್ದಾ ನೆಂಬುದು ನನಗೆ ತಿಳಿದಿಲ್ಲ. ಅಲ್ಲಾಹನಾಣೆ! ಅಂದಿನಿಂದ ಸುಳ್ಳು ಹೇಳುವುದನ್ನು ನಾನು ಮನದಲ್ಲಿಯೂ ಯೋಚಿಸಲಿಲ್ಲ. ಇನ್ನು ಮುಂದೆಯೂ ನಾನು ಅದನ್ನು ಕಾಯ್ದು ಕೊಳ್ಳುತ್ತೇನೆ. ಅದಕ್ಕಾಗಿ ನಾನು ಅಲ್ಲಾಹನೊಡನೆ ಪ್ರಾರ್ಥಿಸುತ್ತೇನೆ. ಪ್ರವಾದಿಯವ ರೊಡನೆ(ಸ) ಸತ್ಯ ಹೇಳಿದ್ದಕ್ಕಾಗಿ ಅಲ್ಲಾಹನು ನನ್ನನ್ನು ಪರೀಕ್ಷಿಸಿರುವಂತೆ ಇತರ ಯಾರನ್ನೂ ಪರೀಕ್ಷಿಸಿದ್ದು ನನಗೆ ತಿಳಿದಿಲ್ಲ.

ಈ ಕುರಿತು ಅಲ್ಲಾಹನು ಕುರ್‌ಆನಿನಲ್ಲಿ ಹೀಗೆ ಸಾರಿದ್ದಾನೆ: "ತೀರ್ಪು ನೀಡದೆ ಪ್ರಕರಣವನ್ನು ತಡೆ ಹಿಡಿದಿದ್ದ ಆ ಮೂವರ ಪಶ್ಚಾತ್ತಾಪವನ್ನು ಅಲ್ಲಾಹನು ಸ್ವೀಕರಿಸಿರುತ್ತಾನೆ. ಅವರ ಬಗೆಗಿನ ತೀರ್ಮಾನವನ್ನು ಅನಿರ್ದಿಷ್ಟವಾಗಿ ತಡೆ ಹಿಡಿಯಲಾಗಿತ್ತು. ಇದರಿಂದ ಅವರು ಅತ್ಯಧಿಕ ಕಳವಳಗೊಂಡಿದ್ದರು, ವಿಶಾಲವಾದ ಭೂಮಿಯು ಅವರಿಗೆ ಇಕ್ಕಟ್ಟಾಗಿ ಬಿಟ್ಟಿತು. ಜೀವನವು ಅವರಿಗೆ ಕಠಿಣವೆನಿಸಿತು. ಅಲ್ಲಾಹನಲ್ಲಲ್ಲದೆ ಅನ್ಯರಲ್ಲಿ ಅಭಯ ವಿಲ್ಲವೆಂದು ಅವರಿಗೆ ಖಚಿತವಾಯಿತು. ತರುವಾಯ ಅವರಲ್ಲಿ ಪಶ್ಚಾತ್ತಾಪದ ಗುಣ ಬೆಳೆಯಲಿಕ್ಕಾಗಿ ಅಲ್ಲಾಹನು ಅವರ ಪಶ್ಚಾತ್ತಾಪವನ್ನು ಸ್ವೀಕರಿಸಿದನು. ಅಲ್ಲಾಹನು ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾಳುವೂ ಆಗಿರುವನು."

3. ಇಸ್ಲಾಮಿಗಾಗಿ

ಪ್ರವಾದಿಯವರೊಡನೆ(ಸ) ಸತ್ಯವನ್ನೇ ಹೇಳುವಂತೆ ಮತ್ತು ಸುಳ್ಳು ಹೇಳದಿರುವಂತೆ ಮಾಡಿದ್ದು ಅಲ್ಲಾಹನ ಮಹಾ ಅನುಗ್ರಹವಾಗಿದೆ. ಅದು ಅಲ್ಲಾಹನು ನನ್ನನ್ನು ಇಸ್ಲಾಮಿಗೆ ಸೇರಿಸಿದ ಬಳಿಕ ನನಗೆ ದಯಪಾಲಿಸಿದ ಮಹಾ ಅನುಗ್ರಹ. ಅದಕ್ಕಿಂತ ದೊಡ್ಡ ಅನುಗ್ರಹ ಆತ ನನಗೆ ಬೇರೆ ನೀಡಿಲ್ಲ. ನಾನು ಸುಳ್ಳು ಹೇಳಿದ್ದರೆ ಅಲ್ಲಾಹನ ಕೋಪಕ್ಕೆ ಪಾತ್ರನಾಗಿ ಬಿಡುತ್ತಿದ್ದೆ. ಪ್ರವಾದಿಯವರೊಡನೆ(ಸ) ಸುಳ್ಳು ಹೇಳಿ ಜಾರಿಕೊಂಡವರಿಗೆ ಅಲ್ಲಾಹನ ಕೋಪ ಮತ್ತು ಶಾಪ ಲಭಿಸಿತು. ಈ ಕುರಿತು ವಹ್ಯ್ ಅವತೀರ್ಣಗೊಂಡಾಗ ಅಲ್ಲಾಹನು ಅವರನ್ನು ಅತಿ ನಿಕೃಷ್ಟವಾಗಿ ಚಿತ್ರಿಸಿರುವುದು ವ್ಯಕ್ತವಾಯಿತು. (ಬುಖಾರಿ-ಮುಸ್ಲಿಮ್)

**ಟಿಪ್ಪಣಿಗಳು:**

1. ಒಂದು ನೈಜ ಇಸ್ಲಾಮೀ ಸಂಘಟನೆಯ ಸದಸ್ಯರಿಗೆ ಶಿಸ್ತು, ಅನುಸರಣೆ ಮತ್ತು ಕರ್ತವ್ಯ ಪ್ರಜ್ಞೆ ಎಷ್ಟೊಂದು ಕಡ್ಡಾಯವೆಂಬುದನ್ನು ಈ ಚರಿತ್ರೆಯಿಂದ ಗ್ರಹಿಸಬಹುದು. ಸಹಸ್ರಾರು ಯೋಧರ ಪೈಕಿ ಕೇವಲ ಮೂವರು ಅಸಡ್ಡೆಯಿಂದ ಯುದ್ಧದಲ್ಲಿ ಭಾಗವಹಿಸದಿದ್ದುದಕ್ಕಾಗಿ ಅವರ ವಿರುದ್ಧ ಕೈಗೊಂಡ ಶಿಸ್ತು ಕ್ರಮದ ಗಂಭೀರ ಸ್ವರೂಪವನ್ನು ನಾವು ಇಲ್ಲಿ ನೋಡಿದೆವು. ಆ ಮೂವರ ಪಾಪವನ್ನು ಕ್ಷಮಿಸಲು 50 ದಿನ ಬೇಕಾಯಿತು. 50 ದಿನ ಪಶ್ಚಾತ್ತಾಪ ಪಟ್ಟು ಪ್ರಲಾಪಿಸಿದ ಬಳಿಕವೇ ಅಲ್ಲಾಹ್, ಅವನ ಪ್ರವಾದಿ ಮತ್ತು ಮುಸ್ಲಿಮರು ಅವರಿಗೆ ಕ್ಷಮೆ ನೀಡಿದ್ದರು.

2. ಈ ಚರಿತ್ರೆಯ ಹಿನ್ನೆಲೆಯಲ್ಲಿ ನಾವು ಇಂದಿನ ಮುಸ್ಲಿಮರನ್ನು ನೋಡಬೇಕು. ಅವರು ಎಲ್ಲಿಗೆ ತಲಪಿರುವರೆಂದು ಆಗ ವ್ಯಕ್ತವಾದೀತು. ಓರ್ವ ನಾಯಕನ ಆಶ್ರಯದಲ್ಲಿ ಸಂಘಟಿಸಿ ಶಿಸ್ತಿನಿಂದ ಇಸ್ಲಾಮಿನ ಯಶಸ್ಸಿಗಾಗಿ ಶ್ರಮಿಸಿ, ಸಂದರ್ಭ ಬಂದರೆ ಇಸ್ಲಾಮೀ ಹೋರಾಟದ ಹಾದಿಯಲ್ಲಿ ಹುತಾತ್ಮರಾಗುವುದರ ಅಗತ್ಯ ಮತ್ತು ಮಹತ್ವವನ್ನು ಅವರು ತಿಳಿದಿಲ್ಲ.

3. ಈ ಚರಿತ್ರೆಯ ಪಾತ್ರಧಾರಿಗಳಾದ ಮೂವರ ಅಸಡ್ಡೆಯ ಅಶಿಸ್ತನ್ನು ಅವರ ಹಿಂದಿನ ಸೇವೆಯ ಹಿನ್ನೆಲೆಯಲ್ಲಿ ಕ್ಷಮಿಸಿಬಿಡಲು ಇಸ್ಲಾಮೀ ಆಂದೋಲನ ಸಿದ್ಧವಾಗಲಿಲ್ಲ.

4. ಆಂದೋಲನದ ಬಂದಣಿಕೆಗಳಾದ ಕಪಟಿಗಳು ಸುಳ್ಳು ಹೇಳಿ ಜಾರಿದರು. ಆಂದೋಲನಕ್ಕೆ ಹಾಲುಣಿಸಿ ಬೆಳೆಸಿದ ವ್ಯಕ್ತಿಗಳು ಸತ್ಯವನ್ನು ಬಹಿರಂಗ ಪಡಿಸಿದರು. ಆದ್ದರಿಂದ ಅವರು ಕಠಿಣ ಪರೀಕ್ಷೆಗಳಿಗೆ ಗುರಿಯಾದರು. ತಮ್ಮ ವಿರುದ್ಧ ಶಿಸ್ತು ಕ್ರಮ ಕೈಗೊಂಡ ನಾಯಕತ್ವದ ಬಗ್ಗೆ ಅವರಿಗೆ ಕಿಂಚಿತ್ತೂ ದ್ವೇಷ ಅಥವಾ ಜಿಗುಪ್ಸೆಯುಂಟಾಗಲಿಲ್ಲ. ಬದಲಾಗಿ ತಮ್ಮ ತಪ್ಪುಗಳ ಬಗ್ಗೆ ವಿಷಾದಿಸಿ ಪಶ್ಚಾತ್ತಾಪಪಟ್ಟರು.

ಶಿಸ್ತು ಕ್ರಮಗಳಿಗಾಗಿ ನಾಯಕರನ್ನು ದೂಷಿಸುವುದು ಅಥವಾ ಸಂಘಟನೆಯನ್ನು ದುರ್ಬಲಗೊಳಿಸುವ ಚಟುವಟಿಕೆಗಳಲ್ಲಿ ನಿರತವಾಗುವುದು ಸತ್ಯವಿಶ್ವಾಸಿಗಳಿಗೆ ಭೂಷಣವಲ್ಲ. ಬದಲಾಗಿ, ಶಿಸ್ತು ಕ್ರಮಕ್ಕೆ ಕಾರಣವಾದ ದುರ್ಗುಣಗಳನ್ನು ಕೈಬಿಡುವುದೇ ಅದಕ್ಕೆ ಪರಿಹಾರವಾಗಿದೆ. ಮುಂದೆ ಅಂತಹ ತಪ್ಪು ಮರುಕಳಿಸದಂತೆ ಎಚ್ಚರ ವಹಿಸಬೇಕು. ಸಂಘಟನೆಯೊಂದಿಗಿನ ತಮ್ಮ ಸಂಬಂಧವನ್ನು ಮತ್ತಷ್ಟು ಸುದೃಢಗೊಳಿಸಬೇಕು. ಅದಕ್ಕಾಗಿ ತೀವ್ರವಾಗಿ ಪ್ರಯತ್ನಿಸಬೇಕು. ಇದು ಉತ್ತಮ ಆದರ್ಶನಿಷ್ಠ ವಿಶ್ವಾಸಿಗಳು ಅಂಗೀಕರಿಸಬೇಕಾದ ಕಾರ್ಯ ರೀತಿಯಾಗಿದೆ. ಈ ಮಾದರಿಗಳನ್ನು ಕಅಬ್(ರ) ಮತ್ತು ಸಂಗಾತಿಗಳು ತಮ್ಮ ಜೀವನವೆಂಬ ಬೆಳ್ಳಿ ರೇಖೆಯಿಂದ ಮುಸ್ಲಿಮ್ ಜಗತ್ತಿಗೆ ಅರ್ಪಿಸಿದ್ದಾರೆ.

+++

# ಸ್ವಪ್ನ ಸಂಚಾರ

"ನಿಮಗೆ ಏನಾದರೂ ಕನಸು ಬಿದ್ದಿದೆಯೇ?" ಪ್ರವಾದಿಯವರು(ಸ) ಕೆಲವೊಮ್ಮೆ ಸಹಾಬಿಗಳೊಡನೆ ಕೇಳುತ್ತಿದ್ದರು. ಆಗ ಯಾರಾದರೂ ತಾವು ಕಂಡ ಕನಸನ್ನು ವಿವರಿಸು ತ್ತಿದ್ದರು. ಇದೊಂದು ರೂಢಿಯಾಗಿತ್ತು. ಅದೊಂದು ರಾತ್ರಿ ಪ್ರವಾದಿಯವರಿಗೆ ಒಂದು ಅದ್ಭುತ ಕನಸು ಬಿತ್ತು. ಬೆಳಗಾತ ಪ್ರವಾದಿವರ್ಯರು(ಸ) ಅದನ್ನು ಅನುಯಾಯಿಗಳಿಗೆ ವಿವರಿಸಿದರು:

ನಾನು ನಿದ್ರಾವಶನಾಗಿದ್ದೆ. ನನ್ನ ಬಳಿಗೆ ಇಬ್ಬರು ಬಂದರು. ಅವರು ಬಂದ ಕೂಡಲೇ 'ನಮ್ಮ ಜತೆ ಬನ್ನಿ' ಎಂದು ಹೇಳಿದರು. ತಕ್ಷಣ ನಾನು ಅವರೊಂದಿಗೆ ಹೊರಟೆ. ಅವರು ನನ್ನನ್ನು ಒಂದು ಸ್ಥಳಕ್ಕೆ ಕರೆದೊಯ್ದರು. ನಾವು ಮೊದಲು ಒಬ್ಬರನ್ನು ನೋಡಿದೆವು. ಅವರು ಮಲಗಿದ್ದರು. ಅವರ ಹತ್ತಿರವೇ ಮತ್ತೊಬ್ಬರು ನಿಂತಿದ್ದರು. ನಿಂತವನ ಕೈಯಲ್ಲಿ ಒಂದು ದೊಡ್ಡ ಕಲ್ಲಿದೆ. ಆತನು ಅದನ್ನು ಮಲಗಿದವನ ತಲೆಗೆ ಹಾಕುತ್ತಾನೆ! ಆಗ ಆತನ ತಲೆ ಜಜ್ಜಿ ಹೋಗುತ್ತದೆ. ಕಲ್ಲು ಒಂದು ಪಾರ್ಶ್ವಕ್ಕೆ ಉರುಳುತ್ತದೆ. ತಕ್ಷಣ ಆತನ ತಲೆಯು ಗುಣಹೊಂದಿ ಪೂರ್ವ ಸ್ಥಿತಿಗೆ ಮರಳುತ್ತದೆ. ನಿಂತಿದ್ದವ ಪುನಃ ಆತನ ತಲೆಗೆ ಕಲ್ಲಿನಿಂದ ಹೊಡೆದ. ತಲೆ ಜಜ್ಜಿ ಹೋಯಿತು. ಪುನಃ ಪೂರ್ವ ಸ್ಥಿತಿಗೆ ತಲಪಿತು. ಈ ಪ್ರಕ್ರಿಯೆ ನಿರಂತರ ನಡೆಯುತ್ತಿದೆ. 'ಸುಬ್‌ಹಾನಲ್ಲಾಹ್'[1] ಏನಿದು? ನಾನು ಸಂಗಡಿಗರೊಡನೆ ಕೇಳಿದೆ. "ಬನ್ನಿ, ಬನ್ನಿ! ನಾವು ಹೋಗೋಣ" ಎನ್ನುತ್ತಾ ಅವರು ನನ್ನನ್ನು ಅಲ್ಲಿಂದ ಕರೆದೊಯ್ದರು. ನಾವು ಮೂವರೂ ಮುಂದೆ ಸಾಗಿದೆವು. ಅದೋ ಅಲ್ಲೊಬ್ಬ ಅಂಗಾತ ಮಲಗಿದ್ದಾನೆ. ಅವನ ಸನಿಹದಲ್ಲಿ ಇನ್ನೊಬ್ಬ ಕಬ್ಬಿಣದ ಕೊಕ್ಕೆ ಹಿಡಿದು ನಿಂತಿದ್ದಾನೆ. ಆತನು ಅದನ್ನು ಮಲಗಿದಾತನ ಬಲಬದಿಯಿಂದ ಬಾಯಿಗೆ ಸಿಲುಕಿಸಿ ಕತ್ತಿನ ತನಕ ಸೀಳುತ್ತಾನೆ. ತರುವಾಯ ಅಲ್ಲಿಂದ ಹೊರತೆಗೆದು ಮೂಗಿನಿಂದ ಬೆನ್ನಿನ ತನಕ ಚುಚ್ಚಿ ಹರಿಯುತ್ತಾನೆ. ತರುವಾಯ ಅದನ್ನು ತೆಗೆದು ಕಣ್ಣಿನಿಂದ ಬೆನ್ನಿನ ತನಕ ಸೀಳುತ್ತಾನೆ. ಅನಂತರ ಎಡ ಭಾಗಕ್ಕೆ ತಿರುಗುತ್ತಾನೆ. ಬಲ ಭಾಗದಲ್ಲಿ ಮಾಡಿದಂತೆಯೇ ಎಡಭಾಗದಲ್ಲಿಯೂ ಮಾಡುತ್ತಾನೆ.

1. "ನಾನು ಅಲ್ಲಾಹನ ಮಹಾತ್ಮೆಯನ್ನು ಪ್ರಶಂಸಿಸುತ್ತೇನೆ." ಆಶ್ಚರ್ಯದ ಸಂದರ್ಭಗಳಲ್ಲಿ ಹೇಳುವ ಮಾತು.

ಅಷ್ಟರಲ್ಲಿ ಬಲಭಾಗ ಗುಣ ಹೊಂದುತ್ತದೆ. ತಕ್ಷಣ ಆತ ಅತ್ತ ತಿರುಗಿ ಪುನಃ ಹಿಂದೆ ಮಾಡಿದಂತೆಯೇ ಮಾಡುತ್ತಾನೆ. ಈ ಕ್ರೂರ ಕೃತ್ಯವನ್ನು ಎಡೆಬಿಡದೆ ಮಾಡುತ್ತಾನೆ. ಸುಬ್‌ಹಾನಲ್ಲಾಹ್ ಈ ಇಬ್ಬರು ಯಾರು? ಎಂದು ನಾನು ಸಹ ಪಯಣಿಗರೊಡನೆ ವಿಚಾರಿಸಿದೆ. ಬನ್ನಿ, ಬನ್ನಿ! ನಾವು ಹೋಗೋಣ ಎನ್ನುತ್ತಾ ಅವರು ನನ್ನನ್ನು ಕರೆದೊಯ್ದರು.

ಹಾಗೆಯೇ ನಾವು ಅಗ್ನಿ ಕುಂಡದಂತಹ ಒಂದು ವಸ್ತುವನ್ನು ನೋಡಿದೆವು. ಅದರ ಮೇಲ್ಭಾಗವು ಕಿರಿದಾಗಿದ್ದು ತಳಭಾಗವು ಅಗಲವಾಗಿತ್ತು. ತಳಭಾಗದಲ್ಲಿ ಅಗ್ನಿ ಹೊತ್ತಿ ಉರಿಯುತ್ತಿತ್ತು. ಅಲ್ಲಿಂದ ನಾನಾ ರೀತಿಯ ದೀನರೋದನ ಮತ್ತು ಆರ್ತನಾದ ಕೇಳಿಸುತ್ತಿತ್ತು. ನಾವು ಹತ್ತಿರ ಹೋಗಿ ಅದರ ಒಳಗೆ ಇಣಿಕಿದೆವು. ಅಲ್ಲಿ ನಗ್ನರಾದ ಅನೇಕ ಸ್ತ್ರೀಪುರುಷರಿದ್ದರು. ಅದರಿಂದ ಬೆಂಕಿಯ ಜ್ವಾಲೆ ಏಳುತ್ತಿತ್ತು. ಅವರು ಅದರಲ್ಲಿ ಕುದಿಯುತ್ತಿದ್ದಾರೆ. ಅವರು ಹೊರ ಬೀಳುವಷ್ಟರ ಮಟ್ಟಿಗೆ ಉಕ್ಕೇರುತ್ತಾರೆ. ಪುನಃ ಕೆಳಗೆ ಹೋಗುತ್ತಾರೆ. ಪುನಃ ಮೇಲೆ ಬರುತ್ತಾರೆ. ಅವರ ಆರ್ತನಾದ ಬಹುದೂರದವರೆಗೂ ಕೇಳಿಸುತ್ತಿತ್ತು. 'ಇವರು ಯಾರು?' ನಾನು ಕೇಳಿದೆ. "ಬನ್ನಿ ಬನ್ನಿ! ನಾವು ಹೋಗೋಣ" ಸಂಗಡಿಗರು ಅವಸರ ಮಾಡಿದರು.

ನಾವು ಪಯಣ ಮುಂದುವರಿಸಿದೆವು. ಒಂದು ನದೀ ತೀರಕ್ಕೆ ಬಂದೆವು. ಅದು ರಕ್ತದಿಂದ ಕೆಂಪಾಗಿದೆ. ಅದೋ ಒಬ್ಬನು ಅಲ್ಲಿ ಈಜುತ್ತಿದ್ದಾನೆ. ಅವನು ದಡಸೇರಲು ಪ್ರಯತ್ನಿಸುತ್ತಿದ್ದಾನೆ. ನದಿ ತೀರದಲ್ಲಿ ಅನೇಕ ಕಲ್ಲುಗಳನ್ನು ರಾಶಿ ಹಾಕಿ ಇನ್ನೊಬ್ಬ ಕುಳಿತಿದ್ದಾನೆ. ಈಜುವಾತನು ದಡದ ಸನಿಹಕ್ಕೆ ತಲಪಿದ. ಆತ ಆಯಾಸದಿಂದ ಬಾಯಿ ತೆರೆದಿದ್ದಾನೆ. ಆಗ ದಡದಲ್ಲಿದ್ದಾತನು ಅವನ ತೆರೆದ ಬಾಯಿಗೆ ಕಲ್ಲೆಸೆಯುತ್ತಾನೆ. ಆದ್ದರಿಂದ ಆತ ದಡ ಸೇರಲಾಗದೆ ಪುನಃ ಹಿಂದಕ್ಕೆಸೆಯಲ್ಪಟ್ಟು ಪುನಃ ಈಜುತ್ತಾನೆ. ದಿಗ್‌ಭ್ರಾಂತನಾಗಿ ಆತ ಪುನಃ ಮರಳಿ ಬರುತ್ತಾನೆ. ವಿವಶನಾದ ಆ ವ್ಯಕ್ತಿಗೆ ಪುನಃ ಹಿಂದಿನ ಅನುಭವವಾಗುತ್ತದೆ. ಆತ ದಡ ಸೇರ ಬಯಸುವ ಪ್ರತಿಯೊಂದು ಸಂದರ್ಭದಲ್ಲಿಯೂ ಈತ ಬಾಯಿಗೆ ಕಲ್ಲೆಸೆಯುತ್ತಾನೆ.

"ಏನಿದು? ಇವರು ಯಾರು?" ಎಂದು ನಾನು ಕೇಳಿದೆ. "ಬನ್ನಿ, ಬನ್ನಿ ನಾವು ಹೋಗೋಣ" ಎಂದು ನನ್ನ ಸಂಗಡಿಗರು ಅವಸರ ಮಾಡಿದರು.

ನಾವು ಪುನಃ ಪಯಣಿಸಿದೆವು. ತರುವಾಯ ಒರ್ವ ಕುರೂಪಿಯ ಬಳಿಗೆ ತಲಪಿದೆವು. ಭೀಕರ ವಿಕೃತ ರೂಪ. ಆತನಷ್ಟು ಕುರೂಪಿ ಬೇರೆ ಯಾರೂ ಇರಲಾರರು. ಆತ ಬೆಂಕಿ ಉರಿಸುತ್ತಿದ್ದಾನೆ. ಆ ಬೆಂಕಿಯ ಸುತ್ತ ಓಡಾಡುತ್ತಿದ್ದಾನೆ. "ಇದು ಯಾರು?" ನಾನು ಕೇಳಿದೆ. "ಬನ್ನಿ ಬನ್ನಿ! ನಾವು ಹೋಗೋಣ" ಎಂದು ಸಂಗಡಿಗರು ಹೇಳಿದರು.

ನಾವು ಪುನಃ ಮುಂದೆ ಸಾಗಿದೆವು. ಹಾಗೆಯೇ ಒಂದು ಹೂದೋಟಕ್ಕೆ ತಲಪಿದೆವು. ಅಲ್ಲಿ ಧಾರಾಳ ಹೂಗಿಡಗಳಿದ್ದುವು. ಅಲ್ಲಿ ವಸಂತದ ಎಲ್ಲಾ ರೀತಿಯ ಹೂಗಳೂ ಇದ್ದುವು.

ಅದರ ಮುಂಭಾಗದಲ್ಲಿ ಒಬ್ಬರಿದ್ದರು. ನೀಳ ಕಾಯದ ಮಾನವ. ಅವರ ಸುತ್ತಲೂ ಅನೇಕ ಮಕ್ಕಳಿದ್ದರು. ಅಪರಿಚಿತ ಮಕ್ಕಳು.

"ಏನಿದು ಕಾಣಿಸುತ್ತಿರುವುದು? ಅವರು ಯಾರು?" ನಾನು ಕೇಳಿದೆ.

"ಬನ್ನಿ, ಬನ್ನಿ! ನಾವು ಹೋಗೋಣ" ಅವರು ಧಾವತಿ ಪಟ್ಟರು.

ನಾವು ಪುನಃ ನಡೆದೆವು. ಒಂದು ಹೆಮ್ಮರದ ಬಳಿಗೆ ತಲಪಿದೆವು. ಬಹಳ ದೊಡ್ಡ ಮತ್ತು ಸುಂದರವಾದ ಮರ! ಅಂಥ ಮರವನ್ನು ನಾನೆಂದೂ ನೋಡಿರಲಿಲ್ಲ. "ಈ ಮರ ಹತ್ತಿರಿ" ಸಂಗಡಿಗರು ನನಗೆ ಸೂಚಿಸಿದರು. ನಾನು ಮರದ ಮೇಲೇರಿದೆ. ನನ್ನ ಜತೆ ಅವರೂ ಏರಿದರು. ಅದರ ಮೂಲಕ ನಾವು ಒಂದು ಪಟ್ಟಣ ಸೇರಿದೆವು. ಬಂಗಾರ ಮತ್ತು ಬೆಳ್ಳಿಯ ಇಟ್ಟಿಗೆಗಳಿಂದ ನಿರ್ಮಿಸಿದ ಪಟ್ಟಣ. ನಾವು ದ್ವಾರದ ಒಳಗೆ ತಲಪಿದೆವು. ಅದನ್ನು ತೆರೆಯುವಂತೆ ತಿಳಿಸಲಾಯಿತು. ತಕ್ಷಣ ಬಾಗಿಲು ತೆರೆದು ಕೊಂಡಿತು. ನಾವು ಒಳಗೆ ಹೋದೆವು. ಅಲ್ಲಿ ಅನೇಕ ಜನರಿದ್ದರು. ಅವರು ನಮ್ಮನ್ನು ಸ್ವಾಗತಿಸಿದರು. ಆ ಜನರ ದೇಹದ ಅರ್ಧಭಾಗವು ಸುಂದರ ಮತ್ತು ಉಳಿದರ್ಧ ಭಾಗವು ವಿರೂಪವಾಗಿತ್ತು. "ಹೋಗಿ ಆ ನದಿಯಲ್ಲಿ ಸ್ನಾನ ಮಾಡಿ ಬನ್ನಿರಿ." ನನ್ನ ಜತೆಯಲ್ಲಿದ್ದವರು ಅವರಿಗೆ ಆಜ್ಞಾಪಿಸಿದರು. ಉತ್ತಮವಾದ ನದಿ- ಹಾಲಿನಂತೆ ಬಿಳಿಯಾದ ನೀರು. ಆಜ್ಞಾಪಿಸಿದ ಕೂಡಲೇ ಅವರು ಹೋಗಿ ಸ್ನಾನ ಮಾಡಿ ಬಂದರು. ಏನದ್ಭುತ! ಸ್ನಾನ ಮಾಡಿದ ಕೂಡಲೇ ಅವರ ವಿರೂಪ ಮಾಯವಾಗಿತ್ತು. ಈಗ ಅವರು ಬಹಳ ಸುಂದರರಾಗಿ ಮಾರ್ಪಟ್ಟಿದ್ದಾರೆ.

ಈ ಎಲ್ಲ ಘಟನೆಗಳು ಮುಗಿದ ಬಳಿಕ ನನ್ನನ್ನು ಕರೆದೊಯ್ದವರು ನಾನು ನೋಡಿದ ಅದ್ಭುತಗಳನ್ನು ವಿವರಿಸಲಾರಂಭಿಸಿದರು. "ಇದು ಜನ್ನತ್ ಅದ್ನ್" ಎಂಬ ಸ್ವರ್ಗವಾಗಿದೆ. ಅದೋ ಅಲ್ಲಿ ಕಾಣಿಸುತ್ತಿರುವುದು ನಿಮ್ಮ ಭವನ. ನಾನು ಕಣ್ಣೆತ್ತಿ ನೋಡಿದೆ. ಬೆಳ್ಳಿ ಮೋಡದಂತಹ ಸೌಧ! 'ಅದೇ ನಿಮ್ಮ ನಿವಾಸ' ಅವರು ನನ್ನೊಡನೆ ಒತ್ತಿ ಹೇಳಿದರು. 'ಅಲ್ಲಾಹನು ನಿಮ್ಮನ್ನು ಅನುಗ್ರಹಿಸಲಿ! ನೀವು ನನಗೊಮ್ಮೆ ಅದರೊಳಗೆ ಪ್ರವೇಶಿಸುವ ಅನುಮತಿ ನೀಡಿರಿ.' ನಾನು ವಿನಂತಿಸಿದೆ. ಈಗ ಹೋಗಬಾರದು. ನಿಮಗೆ ಇನ್ನೂ ಸ್ವಲ್ಪ ಆಯುಷ್ಯವಿದೆ. ಅದು ಮುಗಿದ ಬಳಿಕ ನೀವು ಅದರಲ್ಲಿ ಪ್ರವೇಶಿಸ ಬಹುದು." ಅವರು ಉತ್ತರಿಸಿದರು-

"ನಾನು ಈ ರಾತ್ರಿಯಲ್ಲಿ ಅನೇಕ ವಿಸ್ಮಯಗಳನ್ನು ನೋಡಿದೆನಲ್ಲವೇ, ಅವುಗಳ ವಾಸ್ತವಿಕತೆಯೇನು? ಅವುಗಳನ್ನು ನನಗೊಮ್ಮೆ ತಿಳಿಸಬಹುದೇ?" ನಾನು ವಿನಂತಿಸಿದೆ. "ಖಂಡಿತ ಅವುಗಳನ್ನು ನಾವು ವಿವರಿಸುತ್ತೇವೆ" ಅವರು ವಿವರಿಸಲಾರಂಭಿಸಿದರು:

"ನೀವು ಪ್ರಥಮವಾಗಿ ತಲೆ ಜಜ್ಜಲ್ಪಡುತ್ತಿರುವ ವ್ಯಕ್ತಿಯನ್ನು ನೋಡಿದಿರಲ್ಲವೇ? ಅವರು ಕುರ್‌ಆನ್ ಕಲಿತವರು. ತರುವಾಯ ಅದನ್ನು ನಿರ್ಲಕ್ಷಿಸಿದವರು. ಅವರು ಕಡ್ಡಾಯ ನಮಾಝ್‌ನ ವೇಳೆ ಮಲಗಿ ನಿದ್ರಿಸುತ್ತಿದ್ದರು. ಕಣ್ಣು, ಮೂಗು ಬಾಯಿಗಳಲ್ಲಿ ಕಬ್ಬಿಣದ

ಕೊಕ್ಕೆ ಸಿಲುಕಿಸಿ ಬೆನ್ನಿನ ಹಿಂಭಾಗದ ತನಕ ಸೀಳಲ್ಪಡುವ ಒಬ್ಬ ವ್ಯಕ್ತಿಯನ್ನು ನೀವು ಆ ಬಳಿಕ ನೋಡಿದಿರಲ್ಲವೇ? ಬೆಳಗ್ಗಿನಿಂದ ಸಂಜೆಯ ತನಕ ಸುಳ್ಳು ಹೇಳಿ ನಡೆದಾಡುವುದೇ ಆತನ ಕೆಲಸವಾಗಿತ್ತು. ಘೋರ ಸುಳ್ಳುಗಳು! ಅಗ್ನಿ ಕುಂಡದಲ್ಲಿ ಬೆಂದು ಕುದಿಯು ತ್ತಿರುವ ಸ್ತ್ರೀಪುರುಷರು ವ್ಯಭಿಚಾರಿಗಳಾಗಿದ್ದರು. ನದಿಯಲ್ಲಿ ಈಜಾಡುತ್ತಾ ಬಾಯಿಗೆ ಕಲ್ಲೆಸೆಯಲ್ಪಡುತ್ತಿದ್ದಾತನು ಬಡ್ಡಿಕೋರನಾಗಿದ್ದನು. ಅಗ್ನಿಯ ಸುತ್ತಲೂ ಓಡಾಡುತ್ತಿದ್ದ ವಿರೂಪಿಯು ನರಕ ಪಾಲಕ 'ಮಾಲಿಕ್' ಎಂಬ ದೇವಚರವಾಗಿತ್ತು. ಆ ತೋಟದಲ್ಲಿ ನೋಡಿದ ನೀಳಕಾಯದ ವ್ಯಕ್ತಿ ಪ್ರವಾದಿ ಇಬ್‌ರಾಹೀಮ್(ಅ) ಆಗಿದ್ದರು. ಅವರ ಸುತ್ತಲೂ ಒಡಾಡುತ್ತಿದ್ದವರು ಶುದ್ಧ ಪ್ರಕೃತಿಯಲ್ಲಿಯೇ ಮರಣಹೊಂದಿದ ಅವರ ಮಕ್ಕಳು. ಅರ್ಧ ಸುಂದರ ಮತ್ತು ಅರ್ಧ ವಿರೂಪಿಗಳಾಗಿದ್ದವರು ಒಳಿತು ಮತ್ತು ಕೆಡುಕುಗಳನ್ನು ಮಾಡುತ್ತಿದ್ದವರು. ಅನಂತರ ಅವರು ನದಿಯಲ್ಲಿ ಮುಳುಗಿದಾಗ ಪೂರ್ಣ ಸುಂದರರಾದರು. ಆ ಮೂಲಕ ಅಲ್ಲಾಹನು ಅವರಿಗೆ ಕ್ಷಮೆ ನೀಡಿದನು. ಇದು ನೀವು ನೋಡಿದ ಘಟನೆಗಳು. ನಾನು ಜಿಬ್‌ರಿಲ್, ಇವರು ಮೀಕಾಈಲ್"[2] (ಬುಖಾರಿ)

**ಟಿಪ್ಪಣಿಗಳು:**

1. ದುರ್ಮಾರ್ಗಿಗಳಿಗೆ ಮರಣಾನಂತರ ಲಭಿಸಲಿರುವ ಶಿಕ್ಷೆಗಳ ಕೆಲವು ರೂಪಗಳನ್ನು ಈ ಕಥೆ ನಮಗೆ ತಿಳಿಸುತ್ತದೆ. ಪವಿತ್ರ ಕುರ್‌ಆನ್ ಕಲಿತ ಬಳಿಕ ಅದರಂತೆ ಬಾಳದೆ ಅದನ್ನು ನಿರ್ಲಕ್ಷಿಸುವವರು ಎಂತಹ ನತದೃಷ್ಟರು. ಪರಲೋಕದಲ್ಲಿ ಅಂತಹ ಮಂದಿ ಅನುಭವಿಸುವ ಶಿಕ್ಷೆಯ ಕೆಲವು ಸೂಚನೆಗಳನ್ನು ನಾವು ಇಲ್ಲಿ ನೋಡಿದೆವು.

2. ನಮಾಝ್‌ನಲ್ಲಿ ಅಸಡ್ಡೆ ತೋರಿಸುವುದು ಕಠೋರ ಶಿಕ್ಷೆಗೆ ಕಾರಣವಾಗುವುದೆಂದು ಈ ಕಥೆ ನಮಗೆ ನೆನಪಿಸುತ್ತದೆ.

3. ಸುಳ್ಳು ಹೇಳುವವರು ಕಪಟಿಗಳು ಮತ್ತು ನೀಚರು. ವಾಸ್ತವಿಕತೆಯನ್ನು ಕೂಲಂಕಷವಾಗಿ ವಿಚಾರಿಸಿ ತಿಳಿಯದೆ ವದಂತಿಗಳನ್ನು ಹಬ್ಬಿಸುವವರು ಸುಳ್ಳರೆಂದು ಪ್ರವಾದಿಯವರು(ಸ) ಕಲಿಸಿದ್ದಾರೆ. ಅವಾಸ್ತವಿಕ ಮಾತುಗಳನ್ನು ಹೇಳುವ ಜನ ವಂಚಕರೂ ದೇವ ಮತ್ತು ಧರ್ಮದ ಹೆಸರಲ್ಲಿ ಸುಳ್ಳುವಾದಗಳನ್ನು ಪ್ರಚಾರ ಮಾಡಿ ಮುಗ್ಧ ಜನರನ್ನು ಮೋಸ ಗೊಳಿಸುವವರೂ ಈ ಕಥೆಯಲ್ಲಿ ಹೇಳಿರುವಂತಹ ಕಠೋರ ಶಿಕ್ಷೆಯನ್ನು ಅನುಭವಿಸಬೇಕಾಗಿದೆ.

4. ವ್ಯಭಿಚಾರವು, ಅತಿ ಹೀನವೆಂದು ಪರಿಗಣಿಸಲ್ಪಡುವ ಅತಿ ಹೇಯ ಘೋರ ಪಾಪವಾಗಿದೆ. ವ್ಯಭಿಚಾರ ಮಾಡುವ ಸ್ತ್ರೀ-ಪುರುಷರು ಅಗ್ನಿ ಕುಂಡದಲ್ಲಿ ಸದಾ ಉರಿದು, ಕರಿದು, ಬೆಂದು ಕುದಿಯುತ್ತಿರುವರೆಂದು ಪ್ರವಾದಿ(ಸ) ಎಚ್ಚರಿಕೆ ನೀಡಿದ್ದಾರೆ. ಸ್ವಲ್ಪ

2. ಜಿಬ್‌ರಿಲ್ ಮತ್ತು ಮೀಕಾಈಲ್, ದೇವಚರರು ಪ್ರಕಾಶದಿಂದ ಸೃಷ್ಟಿಸಿದ ದೇವಚರರನ್ನು 'ಮಲಕ್'ಗಳೆನ್ನಲಾಗುತ್ತದೆ.

ಸಮಯದ ಕಾಮ ತೃಪ್ತಿಗಾಗಿ ಮಾನವನು ಎಂತಹ ಘೋರ ಶಿಕ್ಷೆಯನ್ನು ಸಂಪಾದಿಸುತ್ತಿರುವ ನೆಂದು ಆಲೋಚಿಸಿ ನೋಡಿರಿ.

5. ಬಡ್ಡಿಯು ಮಾನವನನ್ನು ನಾಶಪಡಿಸುವ 7 ಮಹಾಪಾಪಗಳಲ್ಲಿ ಸೇರಿದೆ. ಅದನ್ನು ಪಡೆಯುವ, ನೀಡುವ, ಅದಕ್ಕೆ ಸಾಕ್ಷಿ ನಿಲ್ಲುವ ಮತ್ತು ಅದನ್ನು ಬರೆಯುವವರನ್ನು ಪ್ರವಾದಿಯವರು(ಸ) ಶಪಿಸಿದ್ದಾರೆ. ಈ ಮಹಾಪಾಪದ ದುಷ್ಪರಿಣಾಮ ಬಹಳ ಭೀಕರ ವಾಗಿದೆ. ಈ ದುಷ್ಕೃತ್ಯದಲ್ಲಿ ತಲ್ಲೀನರಾದವರು ಕೊನೆಯುಸಿರೆಳೆದ ಬಳಿಕ, ಅನುಭವಿಸ ಬೇಕಾದ ಕಠಿಣ ಯಾತನೆಗಳ ಸ್ವರೂಪವನ್ನು ಈ ಕಥೆಯಿಂದ ಗ್ರಹಿಸಬಹುದು. ಬಡ್ಡಿಯಲ್ಲಿ, ಸ್ವಾರ್ಥ, ಧನಮೋಹ, ದುರಾಸೆ ಎದ್ದು ತೋರುತ್ತದೆ. ಬಡ್ಡಿಯು, ಹಣವಿರುವವನು ಇಲ್ಲದವನ ತಾಪತ್ರಯಗಳನ್ನು ಶೋಷಿಸುವ ಪೈಶಾಚಿಕ ವ್ಯವಹಾರವಾಗಿದೆ. ಅನ್ಯರ ರಕ್ತವನ್ನು ಹೀರಿ ಕುಡಿದ ಬಡ್ಡಿಕೋರನು ನಾಳೆ ಪರಲೋಕದಲ್ಲಿ ರಕ್ತದ ನದಿಯಲ್ಲಿ ಈಜ ಬೇಕಾದೀತು. ಅನ್ಯರ ಸಂಪತ್ತಿಗೆ ಆಸೆಪಟ್ಟು, ಅವನ ಬಾಯಿಗೆ ಕಲ್ಲೆಸೆಯಲಾಗುವುದೆಂಬ ಪ್ರವಾದಿಯವರ(ಸ) ಎಚ್ಚರಿಕೆ ಎಷ್ಟೊಂದು ಅರ್ಥಪೂರ್ಣ.

+++

# ಝುಬೈರ್‌ರ ನಿಷ್ಠೆ

ಝುಬೈರ್ ಬಿನ್ ಅವ್ವಾಮ್(ರ) ಜಮಲ್[1] ಯುದ್ಧಕ್ಕೆ ಹೋಗುವ ಸಿದ್ಧತೆಯಲ್ಲಿದ್ದಾರೆ. ಅವರು ಪುತ್ರ ಅಬ್ದುಲ್ಲಾರನ್ನು(ರ) ಕರೆದು ಹೇಳಿದರು: "ಪ್ರೀತಿಯ ಮಗನೇ! ಆಕ್ರಮಿಸುವವ ಅಥವಾ ಆಕ್ರಮಿಸಲ್ಪಡುವವನಾಗಿಯಲ್ಲದೆ ಈ ಯುದ್ಧದಲ್ಲಿ ಯಾರೂ ಹತರಾಗುವುದಿಲ್ಲ. ನಾನು ಈ ಯುದ್ಧದಲ್ಲಿ ಆಕ್ರಮಿಸಲ್ಪಟ್ಟವನಾಗಿ ಹತನಾಗಲೂಬಹುದು. ಸಾಲದ ಋಣವು ನನ್ನನ್ನು ತೀವ್ರವಾಗಿ ಕಾಡುತ್ತಿರುವ ಏಕೈಕ ಸಮಸ್ಯೆಯಾಗಿದೆ. ಸಾಲ ಕಳೆದು ನಮ್ಮ ಸಂಪತ್ತಿನಲ್ಲಿ ಏನಾದರೂ ಉಳಿಯುವುದು ಕಷ್ಟಸಾಧ್ಯವೆನಿಸುತ್ತಿದೆ.[2] ಆದ್ದರಿಂದ ಪ್ರೀತಿಯ ಪುತ್ರಾ! ನಾನು ಈ ಯುದ್ಧದಲ್ಲಿ ಮರಣ ಹೊಂದಿದರೆ ನೀನು ನಮ್ಮ ಸೊತ್ತುಗಳನ್ನು ಮಾರಿ ನನ್ನ ಸಾಲ ಸಂದಾಯ ಮಾಡಬೇಕು. ಅದು ಅಪರ್ಯಾಪ್ತವಾದರೆ ನನ್ನ ಯಜಮಾನನ ನೆರವು ಕೋರು.!"

'ಯಜಮಾನ' ಎಂಬ ಮಾತಿನ ಇಂಗಿತ ಅಬ್ದುಲ್ಲಾರಿಗೆ(ರ) ಅರ್ಥವಾಗಲಿಲ್ಲ. "ನಿಮ್ಮ ಯಜಮಾನ ಯಾರು?" ಅವರು ತಂದೆಯೊಡನೆ ಕೇಳಿದರು. ಝುಬೈರ್‌ರು(ರ) 'ಅಲ್ಲಾಹ್' ಎಂದುತ್ತರಿಸಿದರು. "ಸಾಲ ಕಳೆದು ನಮ್ಮ ಸೊತ್ತಿನಲ್ಲಿ ಏನಾದರೂ ಉಳಿದರೆ ಅದರ $^1/_3$ ಭಾಗವನ್ನು ನಾನು ವಸಿಯ್ಯತ್ ಮಾಡುತ್ತೇನೆ. ಅದರ $^1/_3$ ಭಾಗ ನಿನ್ನ ಪುತ್ರರಿಗೆ." ಝುಬೈರ್(ರ) ಮುಂದುವರಿಸಿ ಹೇಳಿದರು.

ಪುತ್ರನಿಗೆ ಸೂಕ್ತ ಆದೇಶಗಳನ್ನು ನೀಡಿದ ಬಳಿಕ ಝುಬೈರ್(ರ) ರಣಾಂಗಣಕ್ಕೆ ತೆರಳಿದರು. ಆ ಯುದ್ಧದಲ್ಲಿ ಅವರು ವಧಿಸಲ್ಪಟ್ಟರು. ಸ್ವಲ್ಪ ಚಿರಾಸ್ತಿಯ ಹೊರತು ಅವರ ಬಳಿ ಯಾವ ನಗನಾಣ್ಯವೂ ಇರಲಿಲ್ಲ. ಮದೀನಾ ನಗರದ ಹೊರವಲಯದಲ್ಲಿದ್ದ 'ಗಾಬತ್' ಎಂಬ ಪ್ರಸಿದ್ಧ ಜಮೀನು ಅವರ ಆಸ್ತಿಯಾಗಿತ್ತು. ಮದೀನಾದಲ್ಲಿ ಅವರಿಗೆ 11, ಬಸರಾದಲ್ಲಿ 2, ಕೂಫ ಮತ್ತು ಈಜಿಪ್ಟ್‌ಗಳಲ್ಲಿ ತಲಾ ಒಂದು ಕಟ್ಟಡಗಳಿದ್ದುವು. ಅವರು ಪ್ರವಾದಿವರ್ಯರಿದ್ದ ಎಲ್ಲ ಯುದ್ಧಗಳಲ್ಲಿಯೂ ಭಾಗವಹಿಸಿದ್ದರು. ಪ್ರಸ್ತುತ ಯುದ್ಧಗಳಲ್ಲಿ ಗನೀಮತ್‌ನ (ಯುದ್ಧದಲ್ಲಿ ಸ್ವಾಧೀನ ಪಡಿಸಿದ ವಸ್ತುಗಳು) ಪಾಲಿನಲ್ಲಿ ಅವರಿಗೆ ಆ ಆಸ್ತಿಪಾಸ್ತಿ ಲಭಿಸಿತ್ತು.

---

1. ಜಮಲ್ ಯುದ್ಧ ಹಿಜರಿ 36ರಲ್ಲಿ ನಡೆದಿತ್ತು.
2. ತನ್ನ ಸಾಲದ ಬಗೆಗಿನ ವಿಶೇಷ ಭೀತಿಯಿಂದ ಅವರು ಹೀಗೆ ಹೇಳಿದ್ದರು.

ಕೆಲವರು ತಮ್ಮ ಹಣವನ್ನು ಭದ್ರತೆಗಾಗಿ ಅವರ ವಶ ಒಪ್ಪಿಸುತ್ತಿದ್ದರು. ಅಂಥ ಸಂದರ್ಭಗಳಲ್ಲಿ "ನಾನು ಈ ಹಣವನ್ನು ಸಾಲವೆಂದೇ ಪರಿಗಣಿಸುತ್ತೇನೆಂದು" ಅವರೊಡನೆ ಹೇಳುತ್ತಿದ್ದರು.[3]

ಅಬ್ದುಲ್ಲಾರು(ರ) ತಂದೆಯ ಸಾಲದ ಲೆಕ್ಕ ನೋಡಿದರು. ಒಟ್ಟು 22 ಲಕ್ಷ ಸಾಲವಿತ್ತು.[4] ಆ ಬಳಿಕ ಒಂದು ದಿನ ಹಕೀಮ್ ಬಿನ್ ಹಿಶಾಮ್(ರ) ಅಬ್ದುಲ್ಲಾರನ್ನು(ರ) ಭೇಟಿಯಾದರು. "ಸಹೋದರ ಪುತ್ರ! ನನ್ನ ಸಹೋದರನ[5] ಸಾಲವೆಷ್ಟಿದೆ?' ಹಕೀಮ್(ರ), ಅಬ್ದುಲ್ಲಾರೊಡನೆ(ಸ) ಕೇಳಿದರು. 'ಒಂದು ಲಕ್ಷ'[6] ಅಬ್ದುಲ್ಲಾ(ರ) ಉತ್ತರಿಸಿದರು. "ನಿಮ್ಮ ಒಟ್ಟು ಸಂಪತ್ತು ಅದರ $^1/_9$ ಭಾಗವೂ ಇಲ್ಲವಲ್ಲಾ." ಹಕೀಮ್(ರ) ಹೇಳಿದರು. "ಹಾಗಿದ್ದರೆ, ಸಾಲ 22 ಲಕ್ಷವಿದೆಯೆಂದರೆ ನಿಮ್ಮ ಅಭಿಪ್ರಾಯ ಹೇಗಾದೀತು?' ಅಬ್ದುಲ್ಲಾರು(ರ) ಹಕೀಮ್‌ರ ಪ್ರತಿಕ್ರಿಯೆಗೆ ಉತ್ತರಿಸಿದರು. ಆಗ ಹಕೀಮ್‌ರು(ರ) "ಅಯ್ಯೋ, ಇದನ್ನು ನೀವು ಎಷ್ಟು ಪ್ರಯತ್ನಿಸಿದರೂ ಸಂದಾಯ ಮಾಡಲು ಸಾಧ್ಯವಿಲ್ಲ. ಆದ್ದರಿಂದ ನನ್ನ ಸಹಾಯ ವೇನಾದರೂ ಬೇಕಿದ್ದರೆ ತಿಳಿಸು." ಎಂದು ಹೇಳಿದರು.

ಝುಬೈರ್‌ರು(ರ) 'ಗಾಬತ'ನ್ನು ಒಂದು ಲಕ್ಷದ ಎಪ್ಪತ್ತು ಸಾವಿರಕ್ಕೆ ಖರೀದಿಸಿದ್ದರು. ಅದಕ್ಕೆ ಅಬ್ದುಲ್ಲಾರು 16 ಲಕ್ಷ ಬೆಲೆ ನಿಗದಿಪಡಿಸಿದರು. "ಝುಬೈರ್‌ರಿಂದ ಯಾರಿಗಾದರೂ ಸಾಲಸಂದಾಯವಾಗಬೇಕಿದ್ದರೆ ನಾವು ಅದನ್ನು ಗಾಬತ್‌ನಿಂದ ಸಂದಾಯ ಮಾಡುತ್ತೇವೆ' ಎಂದು ಸಾರಿದರು. ಈ ಸುದ್ದಿ ಕೇಳಿ ಅಬ್ದುಲ್ಲಾ ಬಿನ್ ಜಲ್‌ಫರ್(ರ) ಬಂದರು. ಅವರಿಗೆ ಝುಬೈರ್(ರ) ನಾಲ್ಕು ಲಕ್ಷ ನೀಡಬೇಕಾಗಿತ್ತು. "ಬೇಕಿದ್ದರೆ ನಾನು ಅದನ್ನು ಮನ್ನಾ ಮಾಡುತ್ತೇನೆ" ಇಬ್ನು ಜಲ್‌ಫರ್, ಅಬ್ದುಲ್ಲಾರಿಗೆ(ರ) ತಿಳಿಸಿದರು. 'ಬೇಡ' ಅಬ್ದುಲ್ಲಾ(ರ) ಉತ್ತರಿಸಿದರು. 'ಬೇಕಿದ್ದರೆ ವಾಯಿದೆ ನೀಡುತ್ತೇನೆ.' ಇಬ್ನುಜಲ್‌ಫರ್ ಪುನಃ ಹೇಳಿದರು. 'ಅದೂ ಬೇಡ' ಅಬ್ದುಲ್ಲಾ(ರ) ಪ್ರೀತಿಯಿಂದ ತಿರಸ್ಕರಿಸಿದರು. "ಹಾಗಿದ್ದರೆ ನನಗೆ ನೀಡಬಯಸುವ ಪಾಲನ್ನು ಕೊಡಿರಿ." ಇಬ್ನು ಜಲ್‌ಫರ್ ಹೇಳಿದರು. ಅಬ್ದುಲ್ಲಾರು(ರ) ಅವರ ಪಾಲನ್ನು ನಿರ್ಣಯಿಸಿ ವಿಂಗಡಿಸಿದರು.[7]

---

3. ಭದ್ರತೆಗಾಗಿ ಒಪ್ಪಿಸಿದ ಹಣ ಆಕಸ್ಮಿಕವಾಗಿ ಕಳೆದು ಹೋದರೆ ಅದನ್ನು ಮರಳಿಸ ಬೇಕಾಗಿಲ್ಲ. ಒಪ್ಪಿಸಿದವರ ಹಣವು ನಷ್ಟವಾಗದಿರಲಿಕ್ಕಾಗಿ ಸಾಲವೆಂದು ಪರಿಗಣಿಸುವುದು ಉತ್ತಮ.

4. ಮೂಲದಲ್ಲಿ ವಿನಿಮಯ ವಸ್ತು ಯಾವುದೆಂದು ತಿಳಿಯುವುದಿಲ್ಲ. ಆ ಕಾಲದಲ್ಲಿ ದೀನಾರ್ (ಸುಮಾರು $2^1/_2$ ರೂ.ಬೆಲೆಯ ಚಿನ್ನದ ನಾಣ್ಯ) ಬಳಕೆಯಲ್ಲಿತ್ತು. ಆದ್ದರಿಂದ ಆ ನಾಣ್ಯವೇ ಆಗಿರಬಹುದು.

5. ಹಕೀಮ್‌ರು(ರ) ಝುಬೈರ್‌ರ(ರ) ಸಹೋದರನಲ್ಲ, ಗೋತ್ರ ಮತ್ತು ಮೈತ್ರಿ ಸಂಬಂಧವನ್ನು ಸೂಚಿಸಲಿಕ್ಕಾಗಿ ಅವರು ಅಂದು ಪರಸ್ಪರ ಹಾಗೆ ಕರೆಯುತ್ತಿದ್ದರು.

6. ತಕ್ಷಣವೇ ನೈಜ ವಿವರವನ್ನು ತಿಳಿಯ ಪಡಿಸಿರುವುದರಿಂದ ಇದೊಂದು ಸುಳ್ಳು ಹೇಳಿಕೆಯಲ್ಲ.

7. ತರುವಾಯ ಇಬ್ನು ಜಲ್‌ಫರ್(ರ) ಅದನ್ನು 6 ಲಕ್ಷಗಳಿಗೆ ಮುಆವಿಯಾರಿಗೆ(ರ) ಮಾರಿದ್ದರು.

ಸೊತ್ತಿನ ಕೆಲವಂಶದಿಂದ ಸಾಲ ಸಂಪೂರ್ಣ ಸಂದಾಯವಾಯಿತು. "ಝುಬೈರ್‌ನ ಪ್ರಭೂ! ನೀವು ಅವರ ಸಾಲ ಸಂದಾಯ ಮಾಡು" ಎಂಬ ಪ್ರಾರ್ಥನೆಯ ವಿನಾ ಅಬ್ದುಲ್ಲಾರಿಗೆ(ರ) ಆ ಬಗ್ಗೆ ಯಾವ ಕಷ್ಟವೂ ಆಗಲಿಲ್ಲ. ಸಾಲ ಸಂಪೂರ್ಣ ಸಂದಾಯ ವಾಯಿತು. ಆಗ ಅಬ್ದುಲ್ಲಾರ(ರ) ಸಹೋದರರು ಉಳಿದ ಸೊತ್ತನ್ನು ಪಾಲು ಮಾಡಬೇಕೆಂದು ಹೇಳಿದರು. ಅದಕ್ಕೆ ಅಬ್ದುಲ್ಲಾರು(ರ), "ಅಲ್ಲಾಹನಾಣೆ! ಝುಬೈರ್‌ರಿಂದ ಯಾರಿಗಾದರೂ ಸಾಲ ಸಲ್ಲ ಬೇಕಾಗಿದ್ದರೆ ತಿಳಿಸಿರಿ ಎಂದು 4 ವರ್ಷ ಹಜ್ಜ್ ವೇಳೆಯಲ್ಲಿ ಜಾಹೀರು ಪಡಿಸದೆ ನಾನು ಸೊತ್ತನ್ನು ಪಾಲು ಮಾಡುವುದಿಲ್ಲ" ಎಂದು ಉತ್ತರಿಸಿದರು.

ತಂದೆಯ ಸಾಲವೆಲ್ಲ ಮುಗಿಯಿತೆಂದು ಖಾತ್ರಿಯಾದ ಬಳಿಕ ಅಬ್ದುಲ್ಲಾರು(ರ) ತಂದೆಯ ಅಂತಿಮ ಆದೇಶದಂತೆ $^1/_3$ ಭಾಗವನ್ನು ಬೇರೆ ಇರಿಸಿದರು. ಉಳಿದುದನ್ನು ವಾರೀಸುದಾರರಿಗೆ ಹಂಚಿದರು. ಝುಬೈರ್‌ರಿಗೆ(ರ) ನಾಲ್ವರು ಹೆಂಡ್ತಿಯರಿದ್ದರು. ಅವರಿಗೆ ತಲಾ ಹನ್ನೆರಡು ಲಕ್ಷ ದೊರೆಯಿತು. (ಬುಖಾರಿ)

**ಟಿಪ್ಪಣಿಗಳು:**

1. ಝುಬೈರ್‌ರಿಗೆ(ರ) 5,98,00,000ದ ಆಸ್ತಿಪಾಸ್ತಿಯಿದ್ದಿತೆಂದು ಲೆಕ್ಕಾಚಾರದಿಂದ ವ್ಯಕ್ತವಾಗುತ್ತದೆ. ಅಷ್ಟೊಂದು ಸಂಪತ್ತಿದ್ದರೂ ಅವರು ತಮ್ಮ ದೈಹಿಕ ಸಾಮರ್ಥ್ಯಗಳನ್ನು ಅಲ್ಲಾಹನ ಸಂಪ್ರೀತಿಗಾಗಿ ಬಳಸಲು ಕಿಂಚಿತ್ತೂ ಹಿಂಜರಿಯಲಿಲ್ಲ.

2. ಸಾಲ ಸಂದಾಯದ ವಿಷಯದಲ್ಲಿ ಪ್ರವಾದಿ ಸಂಗಾತಿಗಳಲ್ಲಿದ್ದ ನಿಷ್ಠೆ ಮತ್ತು ಜಾಗ್ರತೆಯೆಷ್ಟಿತ್ತೆಂದು ಈ ಚರಿತ್ರೆಯಿಂದ ವ್ಯಕ್ತವಾಗುತ್ತದೆ. ಝುಬೈರ್‌ರಿಗೆ(ರ) ತನ್ನ ಕೊನೆಗಾಲ ಸಮೀಪಿಸಿದೆಯೆಂದು ಭಾಸವಾಯಿತು. ಆ ಸಂದರ್ಭದಲ್ಲಿಯೂ ಸಾಲದ ಚಿಂತೆಯೇ ಅವರನ್ನು ಕಾಡುತ್ತಿತ್ತು. ಸಾಲ ಸಂದಾಯ ಮಾಡದೆ ನಿಧನರಾದ ಮುಸ್ಲಿಮರಿಗಾಗಿ ಪ್ರವಾದಿಯವರು(ಸ) ಜನಾಝಾ ನಮಾಝ್ ನಿರ್ವಹಿಸುತ್ತಿರಲಿಲ್ಲ. ಬೇರೆ ಯಾರಾದರೂ ನಮಾಝ್ ನಿರ್ವಹಿಸಿರಿ ಎಂದು ಹೇಳುತ್ತಿದ್ದರು. ಮೃತನ ಸಾಲವನ್ನು ಬೇರೆ ಯಾರಾದರೂ ಸಂದಾಯ ಮಾಡಿದರೆ ಅಥವಾ ಸಂದಾಯ ಮಾಡುವೆವೆಂದು ಒಪ್ಪಿಕೊಂಡರೆ ಮಾತ್ರ ಅವರು ನಮಾಝ್ ನಿರ್ವಹಿಸುತ್ತಿದ್ದರು. ಸಾಲ ಸಂದಾಯದ ಮಹತ್ವವನ್ನು ಇದರಿಂದ ಸ್ಪಷ್ಟವಾಗಿ ಗ್ರಹಿಸಬಹುದು.

ಇಂದು ಕೆಲವು ಮುಸ್ಲಿಮರು, ತಮ್ಮ ಬಳಿಯಿರುವ ಎಲ್ಲ ಸೊತ್ತುಗಳನ್ನೂ ಜೀವನಾವಧಿಯಲ್ಲಿಯೇ ಪತ್ನಿ 'ಮಕ್ಕಳು' ಸಂಬಂಧಿಕರ ಹೆಸರಿನಲ್ಲಿ ಮಾಡಿ ಸಾಲಗಾರರನ್ನು ವಂಚಿಸುವ ಕುತಂತ್ರಗಳನ್ನು ನಡೆಸುತ್ತಾರೆ. ಸ್ವಂತ ದೇಹವು ನರಕಕ್ಕೆ ಬಿದ್ದರೂ ಕುಟುಂಬಿಕರು ಸುಖವಾಗಿರಲಿ! ಎಂಬುದು ಅವರ ಆಶೆಯಾಗಿರಬಹುದು.

3. ಪೂರ್ವಕಾಲದ ಮುಸ್ಲಿಮರ ಪರಸ್ಪರ ಪ್ರೀತಿ-ಅನುಕಂಪವನ್ನೂ ಈ ಕಥೆಯಿಂದ ನಾವು ಗ್ರಹಿಸಬಹುದು. ಅವರು ತಮ್ಮ ಜೀವನದಲ್ಲಿ ಸತ್ಯವಿಶ್ವಾಸಿಗಳೆಲ್ಲರೂ ಏಕೋದರ

ಸಹೋದರರೆಂಬ ಪ್ರವಾದಿ ವಚನವನ್ನು ಸಾಕ್ಷಾತ್ಕರಿಸಿದ್ದರು. ಹಕೀಮ್‌ರು(ರ), ಝುಬೈರ್‌ರಿಗೆ(ರ) ಅವರ ಸೊತ್ತಿಗಿಂತ ಅಧಿಕ ಸಾಲವಿದೆಯೆಂದು ಭಾವಿಸಿದ್ದರು. ಹಾಗಿದ್ದರೂ ಆ ಸಾಲವನ್ನು ಸಂದಾಯ ಮಾಡುವ ಘನ ಜವಾಬ್ದಾರಿಕೆಯನ್ನು ಒಪ್ಪಿಕೊಳ್ಳಲು ಅವರು ಸಿದ್ಧರಾದರು.

4. ತಂದೆಯ ಸಾಲ ಸಂದಾಯಕ್ಕಾಗಿ ಅಬ್ದುಲ್ಲಾ ಬಿನ್ ಝುಬೈರ್ ತೋರಿದ ಎಚ್ಚರ ಮತ್ತು ಉತ್ಸುಕತೆ ಶ್ಲಾಘನೀಯವಾಗಿದೆ. ತಮಗೆ ತಿಳಿದಿರುವ ಸಾಲ ಬಾಕಿ ತೀರಿಸಿದ ಬಳಿಕ ಉಳಿದ ಸೊತ್ತನ್ನು ಹಂಚಿಕೊಳ್ಳಲು ಅವರು ಆತುರ ಪಡಲಿಲ್ಲ. ತಂದೆಯ ವತಿಯಿಂದ ಯಾರಿಗಾದರೂ ಏನಾದರೂ ಸಲ್ಲಲು ಬಾಕಿಯಿದೆಯೇ ಎಂಬುದನ್ನು ತಿಳಿಯಲು ಅವರು ಗರಿಷ್ಠ ಪ್ರಯತ್ನಿಸಿದರು. ಪರಲೋಕದಲ್ಲಿ ತಮ್ಮ ತಂದೆಯು ಸುರಕ್ಷಿತರಾಗಬೇಕೆಂಬುದೇ ಅವರ ಹೆಬ್ಬಯಕೆಯಾಗಿತ್ತು. ಇಂಥ ಮಕ್ಕಳನ್ನು ಹೊಂದಿದ ತಂದೆ ತಾಯಂದಿರೇ ಸೌಭಾಗ್ಯಶಾಲಿಗಳು.

+++

# ಕೊಲೆಗಾರ ಸ್ವರ್ಗಕ್ಕೆ!

ಇಸ್ರಾಈಲ್ ಜನಾಂಗದಲ್ಲಿ ಒಬ್ಬ ಕುಖ್ಯಾತ ಕೊಲೆಗಾರನಿದ್ದ. ಆತ 99 ಮಂದಿಯನ್ನು ಕೊಂದಿದ್ದ. ಹೀಗೆ ಅನೇಕ ಮಂದಿಯನ್ನು ಕೊಂದಿದ್ದರೂ ಕೊನೆಗೆ ಆತನಿಗೆ ತನ್ನ ಪಾಪಮಯ ಜೀವನದ ಕುರಿತು ಖೇದವಾಯಿತು. ತನ್ನ ಪರ್ವತ ಸಮಾನ ಪಾಪಗಳಿಗೆ ಪರಿಹಾರ ಹುಡುಕ ಬೇಕೆಂದು ಆತ ಪ್ರಾಮಾಣಿಕವಾಗಿ ಬಯಸಿದನು. ಮುಂದೆ ಉತ್ತಮ ಮಾನವನಾಗಿ ಬಾಳುವ ಅವಕಾಶ ತನಗಿದೆಯೇ ಎಂಬುದನ್ನು ತಿಳಿಯುವ ಜಿಜ್ಞಾಸೆ ಆತನಲ್ಲಿ ತೀವ್ರ ಗೊಂಡಿತು. ತನ್ನನ್ನು ಸನ್ಮಾರ್ಗದತ್ತ ಸಾಗಿಸಬಲ್ಲಂಥ ಒಬ್ಬರ ಉಪದೇಶ ಅವನಿಗೆ ಬೇಕಾಗಿತ್ತು. ಅದಕ್ಕಾಗಿ ಆತ ಮಹಾ ವಿದ್ವಾಂಸರು ಯಾರಿದ್ದಾರೆಂದು ಹುಡುಕಲಾರಂಭಿಸಿದ.

ಆತನಿಗೆ ಒಬ್ಬ ಸನ್ಯಾಸಿಯ ಸುದ್ದಿ ಲಭಿಸಿತು. ಆ ಭಕ್ತನು ತನ್ನನ್ನು ಸತ್ಪಥದಲ್ಲಿ ಸಾಗಿಸಬಹುದೆಂದು ಆತ ಭಾವಿಸಿದ. ಆತ ಸ್ವಲ್ಪವೂ ತಡಮಾಡದೆ ಆ ಸನ್ಯಾಸಿಯ ಬಳಿಗೆ ಹೋದ. "99 ಕೊಲೆ ಮಾಡಿದ ಓರ್ವ ಹಂತಕನಿಗೆ ಪಾಪ ವಿಮೋಚನೆ ದೊರೆತೀತೇ?" ಎಂದು ಆತನೊಡನೆ ಕೇಳಿದ. 'ಇಲ್ಲ' ತಾತ್ಸಾರ ಮತ್ತು ಕೋಪ ಮಿಶ್ರಿತ ಧ್ವನಿಯಲ್ಲಿ ಸನ್ಯಾಸಿ ಉತ್ತರಿಸಿದ. ಇದನ್ನು ಕೇಳಿ ಆತನಿಗೆ ಭಾರೀ ನಿರಾಶೆ ಮತ್ತು ಉದ್ರೇಕವುಂಟಾಯಿತು. ಕೆರಳಿದ ಆತ ಆ ಸನ್ಯಾಸಿಯನ್ನು ಕೊಂದೇ ಹಾಕಿದ. ಈಗ ಆತ ನೂರು ಮಂದಿಯನ್ನು ಕೊಂದ ಪಾಪಿ!

'ಮುಂದೇನು ಮಾಡುವುದು?' ಆ ಕೊಲೆ ಪಾತಕಿಯ ಮನಸ್ಸು ಚಡಪಡಿಸುತ್ತಿತ್ತು. ಆತನ ಮನಸ್ಸು ಸದಾ ಪಿಸುಗುಟ್ಟುತ್ತಿತ್ತು. 'ತಟ್ಟಿರಿ, ತೆರೆಯಲ್ಪಡುವುದು' 'ಭೂಲೋಕದ ವಿದ್ವಾಂಸರಲ್ಲಿ ಮಹೋನ್ನತರು ಯಾರಿದ್ದಾರೆ?' ಆತ ಪುನಃ ಹುಡುಕಲಾರಂಭಿಸಿದ. ಈ ಬಾರಿ ಆತನಿಗೆ ಒಬ್ಬ ಮಹಾ ವಿದ್ವಾಂಸನ ವಿವರ ತಿಳಿಯಿತು. ತಡ ಮಾಡದೆ ಆತ ಆ ವಿದ್ವಾಂಸನ ಬಳಿಗೆ ಹೋದ. "ನೂರು ಮಂದಿಯನ್ನು ಕೊಂದ ಒಬ್ಬ ಪಾಪಿಯು ಮೋಕ್ಷಕ್ಕೆ ಅರ್ಹನೇ?" ಆತ ತನ್ನ ಸಂದೇಹವನ್ನು ವಿದ್ವಾಂಸನಿಗೆ ತಿಳಿಸಿದ. ಆಗ ವಿದ್ವಾಂಸರು ಹೀಗೆ ಉತ್ತರಿಸಿದರು: "ಹೌದು, ಖಂಡಿತವಾಗಿಯೂ ಆತ ಮೋಕ್ಷಕ್ಕೆ ಅರ್ಹನಾಗಿದ್ದಾನೆ. ಮನಪೂರ್ವಕ ಪಶ್ಚಾತ್ತಾಪಪಟ್ಟು ಅಲ್ಲಾಹನತ್ತ ಮರಳುವ ಮಂದಿಯನ್ನು ಅಲ್ಲಾಹನು ಖಂಡಿತವಾಗಿಯೂ ಸ್ವಾಗತಿಸುತ್ತಾನೆ. ದೇವ ಕಾರುಣ್ಯದಿಂದ ಯಾವ ಶಕ್ತಿಯೂ ಆತನನ್ನು

ತಡೆಯಲಾರದು. ಆದ್ದರಿಂದ ನೀನು ಆ ಊರಿಗೆ[1] ಹೋಗು. ಅಲ್ಲಿ ಅಲ್ಲಾಹನಿಗೆ ಸಂಪೂರ್ಣ ವಿಧೇಯವಾಗಿ ಬಾಳುವ ಅನೇಕ ಸಜ್ಜನರಿದ್ದಾರೆ. ನೀನು ಅಲ್ಲಿ ಹೋಗಿ ಅವರ ಜತೆ ವಾಸಿಸು. ನೀನು ಎಂದೆಂದಿಗೂ ಸ್ವಂತ ಊರಿಗೆ ಮರಳ ಬೇಡ. ನಿನ್ನ ಊರು ಬಹಳ ಕೆಟ್ಟು ಹೋಗಿದೆ."

ಅಂತೆಯೇ ಆತ ಆ ವಿದ್ವಾಂಸರು ಸೂಚಿಸಿದ ಊರಿಗೆ ಹೊರಟನು. ಅರ್ಧ ದಾರಿಯಲ್ಲಿ ಆತ ಮೃತ್ಯು ವಶನಾದ. ಈತನ ಆತ್ಮವನ್ನು ಯಾರು ಕೊಂಡೊಯ್ಯಬೇಕು? ರಹ್ಮತ್ (ಸೌಭಾಗ್ಯ) ಮತ್ತು ಅದಾಬ್‌ನ (ಶಿಕ್ಷೆ) ದೇವಚರರ ಮಧ್ಯೆ ತರ್ಕವುಂಟಾಯಿತು. "ಈತ ತನ್ನ ದುಷ್ಕೃತ್ಯಗಳಿಗಾಗಿ ದುಃಖಿಸಿ ಅತ್ಯಧಿಕ ಪಶ್ಚಾತ್ತಾಪಪಟ್ಟು ಹೃದಯವನ್ನು ಅಲ್ಲಾಹನಲ್ಲಿ ಅರ್ಪಿಸಿ ಪಯಣಿಸುತ್ತಿದ್ದಾನೆ. ಆದ್ದರಿಂದ ಈ ಸಜ್ಜನನ ಪಾವನ ಆತ್ಮವನ್ನು ಸ್ವೀಕರಿಸಬೇಕಾದವರು ನಾವು." ಸೌಭಾಗ್ಯದ ದೇವಚರರು ಹೇಳಿದರು: "ಅಲ್ಲ, ಈತ ಜೀವನದಲ್ಲಿ ಅಣು ಗಾತ್ರದಷ್ಟು ಸತ್ಕರ್ಮವೆಸಗದ ಮಹಾ ಪಾಪಿಯಾಗಿದ್ದಾನೆ. ಆದ್ದರಿಂದ ಈ ದುಷ್ಟನ ನೀಚ ಆತ್ಮವನ್ನು ನಿಷ್ಕರುಣೆಯಿಂದ ವಶಪಡಿಸಬೇಕಾದ ಹೊಣೆ ನಮ್ಮದು." ಶಿಕ್ಷೆಯ ದೇವಚರರು ವಾದಿಸಿದರು.

ದೇವಚರರ ವಾಗ್ವಾದ ತೀವ್ರವಾಯಿತು. ಆಗ ಇನ್ನೊಬ್ಬ ದೇವಚರ ಮಾನವ ರೂಪದಲ್ಲಿ ಅಲ್ಲಿಗೆ ಬಂದ. ಆಗಂತುಕನು ಅವರ ನಡುವೆ ಮಧ್ಯಸ್ಥಿಕೆ ವಹಿಸಿ ಹೀಗೆ ಹೇಳಿದ: "ಇವರು ಸಂಚರಿಸಿರುವ ಹಾದಿಯ ದೂರವನ್ನೂ ಸಂಚರಿಸಲು ಬಾಕಿಯಿರುವ ಹಾದಿಯ ದೂರವನ್ನೂ ಅಳೆದು ನೋಡಿರಿ. ಇವರು ತಾನು ಹೋಗ ಬಯಸಿದ್ದ ಸ್ಥಳಕ್ಕೆ ಸ್ವಲ್ಪವಾದರೂ ಹತ್ತಿರವಾಗಿದ್ದರೆ ಇವರ ಆತ್ಮವನ್ನು ರಹ್ಮತ್‌ನ ದೇವಚರರು ಸ್ವೀಕರಿಸಲಿ! ಇವರು ಹೊರಟ ಪ್ರದೇಶಕ್ಕೆ ಹತ್ತಿರವಾಗಿದ್ದರೆ ಅದಾಬ್‌ನ ದೇವಚರರು ವಹಿಸಿಕೊಳ್ಳಲಿ!" ಸಂಧಾನಕಾರ ತೀರ್ಪು ನೀಡಿದ. ಅವರು ಹಾದಿಯ ಎರಡು ಕಡೆಯಿಂದಲೂ ನಿಖರವಾಗಿ ಅಳೆದು ನೋಡಿದಾಗ ಅವರು ತಲಪಬೇಕಾಗಿರುವ ಸ್ಥಳವು ಒಂದು ಗೇಣು ಹತ್ತಿರ ವಿದೆಯೆಂದು ತಿಳಿಯಿತು. ತರುವಾಯ ಅವರ ಆತ್ಮವನ್ನು ರಹ್ಮತ್‌ನ ದೇವಚರರು ಸಂತೋಷದಿಂದ ಸ್ವೀಕರಿಸಿದರು." (ಬುಖಾರಿ-ಮುಸ್ಲಿಮ್)

**ಟಿಪ್ಪಣಿಗಳು:**

1. ಅಲ್ಲಾಹನ ಅಪಾರ ಕರುಣೆ, ಪಶ್ಚಾತ್ತಾಪದ ಮಹತ್ವ ಮತ್ತು ಅದರ ಉನ್ನತ ಪ್ರತಿಫಲವನ್ನು ಈ ಕಥೆ ಸೂಚಿಸುತ್ತದೆ. ಮಾನವನಲ್ಲಿ ಒಳಿತು ಕೆಡುಕುಗಳ ಅಭಿರುಚಿಯಿದೆ. ಕೆಟ್ಟ ಪರಿಸರವು ದುರ್ಭಾವನೆಯನ್ನು, ಉತ್ತಮ ಪರಿಸರವು ಸದ್ಭಾವನೆಯನ್ನು ಬೆಳೆಸುತ್ತದೆ. ಒಬ್ಬ ಮಾನವನು ಎಷ್ಟೇ ಪಾಪಿಯಾಗಿದ್ದರೂ ಆತನಲ್ಲಿ ಸದ್ಭಾವನೆಯ ಅಂಶ ಕಿಂಚಿತ್ತಾದರೂ ಇದ್ದರೆ ತನ್ನ ದುಷ್ಕೃತ್ಯಗಳಿಗಾಗಿ ಆತನ ಅಂತರಂಗವು ಆತನನ್ನು ಶಪಿಸುತ್ತಿರುತ್ತದೆ.

1. 'ಬಸ್ರಾ' ದೇಶದ 'ಕುಫ್ರಾ' ಎಂಬ ಊರಿಗೆ ಹೋಗುವಂತೆ ಆದೇಶಿಸಲಾಯಿತೆಂದು ತಬ್ರಾನೀ ವರದಿ ಮಾಡಿದ ಹದೀಸ್‌ನಲ್ಲಿದೆ.

ಆದ್ದರಿಂದ ಪಶ್ಚಾತ್ತಾಪದ ಅವಕಾಶವು ಆತನಲ್ಲಿ ಸದಾ ಉಳಿದಿರುತ್ತದೆ. ಹೀಗೆ ಎಂದಾದರೂ ಆತನಿಗೆ ತನ್ನ ದುಷ್ಕೃತ್ಯಗಳ ಬಗ್ಗೆ ದುಃಖ ಮತ್ತು ವಿಷಾದವುಂಟಾದರೆ ಆತ ಪರಿಶುದ್ಧ ನಾಗಬಲ್ಲನು. ಅಲ್ಲಾಹನು ಎಲ್ಲ ಸಂದರ್ಭಗಳಲ್ಲಿಯೂ ತನ್ನ ದಾಸರ ಪಶ್ಚಾತ್ತಾಪವನ್ನು ಸ್ವೀಕರಿಸುತ್ತಾನೆ. ಮಾನವನು ಪಶ್ಚಾತ್ತಾಪಪಟ್ಟು ಮರಳುವುದು ಅಲ್ಲಾಹನಿಗೆ ಅತ್ಯಧಿಕ ಪ್ರಿಯವಾದ ಕರ್ಮವಾಗಿದೆ. ಪ್ರವಾದಿವರ್ಯರು(ಸ) ಆ ಕುರಿತು ನೀಡಿರುವ ಉದಾಹರಣೆಯನ್ನು ನೋಡಿರಿ: ಒಂದು ನಿರ್ಜನ ಮರುಭೂಮಿಯಲ್ಲಿ ಪಯಣಿಸುತ್ತಿದ್ದ ಓರ್ವ ಯಾತ್ರಿಕನ ಒಂಟೆಯು ಹಾದಿ ತಪ್ಪಿ ಕಾಣೆಯಾಗುತ್ತದೆ. ಆತನ ಆಹಾರ ಪಾನೀಯಗಳೆಲ್ಲವೂ ಆ ಒಂಟೆಯ ಮೇಲಿದೆ. ಆತ ಒಂಟೆಯನ್ನು ಹುಡುಕಾಡಿ ಸಿಗದೆ ಹತಾಶನಾಗುತ್ತಾನೆ. ಹಾಗೆಯೇ ಆತ ಒಂದು ಮರದ ಬುಡದಲ್ಲಿ ಮಲಗಿ ತನ್ನ ಅಂತಿಮ ಕ್ಷಣವನ್ನು ನಿರೀಕ್ಷಿಸುತ್ತಿದ್ದಾನೆ. ಅಷ್ಟರಲ್ಲಿ ಆತನ ಒಂಟೆಯು ದಿಢೀರನೆ ಆತನ ಮುಂದೆ ಪ್ರತ್ಯಕ್ಷವಾಗುತ್ತದೆ. ಆಗ ಆ ಯಾತ್ರಿಕನಿಗೆ ಎಷ್ಟೊಂದು ಸಂತೋಷವಾದೀತು! ಓರ್ವ ದಾಸನು ಪಶ್ಚಾತ್ತಾಪ ಪಟ್ಟು ಮರಳಿದರೆ ಅಲ್ಲಾಹನಿಗೆ ಅದಕ್ಕಿಂತ ಹೆಚ್ಚು ಸಂತೋಷವಾಗುತ್ತದೆ.

2. ಪಶ್ಚಾತ್ತಾಪವನ್ನು ಸ್ವೀಕರಿಸುವ ದೇವನೀತಿಯು ಮಾನವನನ್ನು ದುಷ್ಕೃತ್ಯಗಳಿಗೆ ಪ್ರೇರೇಪಿಸುವುದೆಂಬ ಭಾವನೆ ಸರಿಯಲ್ಲ. ಅದು ಖಂಡಿತವಾಗಿಯೂ ದುಷ್ಕರ್ಮಿಗಳಿಗೆ ಸತ್ಕರ್ಮಿಗಳಾಗುವ ಪ್ರೇರಣೆಯನ್ನು ನೀಡುತ್ತದೆ.

3. ಅಲ್ಲಾಹನು ತನ್ನ ನ್ಯಾಯ ಮತ್ತು ಕರುಣೆಯ ಆಧಾರದಲ್ಲಿ ಪರಲೋಕದಲ್ಲಿ ಶಿಕ್ಷೆ ಮತ್ತು ಪ್ರತಿಫಲವನ್ನು ನೀಡುತ್ತಾನೆ. ಅದು ಕೇವಲ ಕರ್ಮ ಫಲವಲ್ಲ. ಅಲ್ಲಾಹನು ಪಾಪವನ್ನು ಕ್ಷಮಿಸಿಬಿಟ್ಟರೆ ಆ ಬಳಿಕ 'ಕರ್ಮಫಲ'ವೆಂಬುದೇ ಉಳಿಯಲಾರದು.

4. ಮಾನವನ ಪರಲೋಕ ಸ್ಥಿತಿಯು ಮಾನವ ಜೀವನದ ಅಂತಿಮ ಹಂತವನ್ನು ಅವಲಂಬಿಸಿದೆ. ಒಟ್ಟಿನಲ್ಲಿ ಮಾನವನು ಭೂಮಿಯಲ್ಲಿ ಸಜ್ಜನನಾಗಿ ಬಾಳಲು ಸದಾ ಪ್ರಯತ್ನಿಸಬೇಕು. ಏಕೆಂದರೆ ತಮ್ಮ ಕೊನೆಗಾಲ ಯಾವಾಗ ಎಂಬುದು ಯಾರಿಗೂ ತಿಳಿದಿಲ್ಲವಷ್ಟೆ.

5. ಧಾರ್ಮಿಕ ಶಿಕ್ಷಣದ ಶ್ರೇಷ್ಠತೆ ಮತ್ತು ಅಗತ್ಯವನ್ನು ಈ ಚರಿತ್ರೆ ಸೂಚಿಸುತ್ತದೆ. ಈ ಕಥೆಯಲ್ಲಿರುವ ಪಾಮರ ಸನ್ಯಾಸಿಯು ದುಷ್ಟನನ್ನು ಇನ್ನಷ್ಟು ದುಷ್ಟನಾಗುವಂತೆ ಮಾಡಿದ. ಆದರೆ ವಿದ್ವಾಂಸನು ಓರ್ವ ಮಹಾ ಪಾಪಿಯನ್ನು ಪಾವನಗೊಳಿಸಿ ಸ್ವರ್ಗಕ್ಕೆ ಅರ್ಹನಾಗಿ ಮಾರ್ಪಡಿಸಿದ.

6. ಸುಧಾರಣಾ ಚಟುವಟಿಕೆಗಳಲ್ಲಿ ನಿರತರಾಗಿರುವ ಇಸ್ಲಾಮೀ ಕಾರ್ಯಕರ್ತರಿಗೆ ಈ ಕಥೆಯಲ್ಲಿ ಪಾಠವಿದೆ. "ನಿನ್ನ ಪ್ರಭುವಿನ ಮಾರ್ಗದೆಡೆಗೆ ಯುಕ್ತಿ ಮತ್ತು ಸದುಪದೇಶದಿಂದ ಸದಾ ಆಹ್ವಾನಿಸು" ಎಂಬ ದೇವಾಜ್ಞೆಯು ಅವರ ಮನ-ಮಸ್ತಿಷ್ಕಗಳಲ್ಲಿ ಸದಾ ಜಾಗೃತವಾಗಿರಬೇಕು. ವಿವೇಕವಂತ ವಿದ್ವಾಂಸನ ಉಪದೇಶದಲ್ಲಿ ಅದು ನಮಗೆ ವ್ಯಕ್ತವಾಗುತ್ತದೆ.

ದ್ವೇಷದ ಬದಲಾಗಿ ಪ್ರೀತಿ-ಅನುಕಂಪದಿಂದ ವರ್ತಿಸಿದರೆ ಎಂಥ ಪಾತಕಿಯನ್ನೂ ಸನ್ಮಾರ್ಗದ ಕಡೆಗೆ ಸೆಳೆಯಬಹುದೆಂದು ಆ ವಿದ್ವಾಂಸ ಸಾಬೀತು ಪಡಿಸಿದ್ದಾರೆ. ಜಾಣ್ಮೆಯಿಲ್ಲದ ಉಪದೇಶ ಮತ್ತು ಆಜ್ಞೆಯು ತಿರಸ್ಕರಿಸಲ್ಪಡುತ್ತದೆ.

7. ಓರ್ವ ಸದ್ಗುಣ ಸಂಪನ್ನ ವ್ಯಕ್ತಿಯಾಗಿದ್ದರೂ ದುರ್ಜನರ ಸಹವಾಸದಿಂದ ದುಷ್ಟನಾಗಿ ಬಿಡಬಹುದು. ಸಾಮಾನ್ಯವಾಗಿ ಆತ್ಮ ನಿಯಂತ್ರಣದಲ್ಲಿ ಹಿಂದೆ ಬಿದ್ದವರೆಲ್ಲರೂ ಹೆಚ್ಚಾಗಿ ಅದಕ್ಕೆ ಬಲಿಯಾಗುತ್ತಾರೆ. ಆದ್ದರಿಂದ ಸತ್ಯನಿಷ್ಠೆಯಿಂದ ಬಾಳ ಬಯಸುವವರೆಲ್ಲರೂ ತಮ್ಮ ಸುರಕ್ಷಿತತೆಗಾಗಿ ದುರ್ಜನರ ಸಂಗವನ್ನು ತೊರೆದು ಸಜ್ಜನರ ಸಂಗ ಬೆಳೆಸಬೇಕು. ಆದ್ದರಿಂದಲೇ ಕಥೆಯ ನಾಯಕನೊಡನೆ ಆ ವಿದ್ವಾಂಸನು ದೇಶ ತೊರೆಯುವಂತೆ ಆದೇಶಿಸಿದ್ದರು.

8. ಓರ್ವ ಮಹಾಪಾಪಿಯು ಸುಧಾರಣೆಯ ಹಾದಿಯಲ್ಲಿ ಒಂದು ಗೇಣು ಹತ್ತಿರ ವಿದ್ದುದರಿಂದ ಆತನು ಸಜ್ಜನರ ಗಣದಲ್ಲಿ ಸೇರಿದ್ದನ್ನು ನಾವು ನೋಡಿದೆವು. ಅಲ್ಲಾಹನು ಪ್ರತಿಯೊಬ್ಬ ಸತ್ಯವಿಶ್ವಾಸಿಯ ಅತಿ ಕ್ಷುಲ್ಲಕ ಪ್ರಯತ್ನವನ್ನೂ ಪರಿಗಣಿಸುತ್ತಾನೆ. ಮಾನವನ ಯಶಸ್ಸು, ಆತನ ಚಟುವಟಿಕೆಗಳು ಒಳಿತಿನತ್ತ ವಾಲಿರುವುದನ್ನು ಅವಲಂಬಿಸಿದೆಯೆಂದು ಈ ಕಥೆ ನಮಗೆ ಕಲಿಸುತ್ತದೆ.

+++

# ಜಾಬಿರ್‌ರ ಸತ್ಕಾರ

ಪ್ರವಾದಿ(ಸ) ಮತ್ತು ಸಂಗಾತಿಗಳು ಕಂದಕ ಯುದ್ಧದ ತಯಾರಿಯಲ್ಲಿ ನಿರತ ರಾಗಿದ್ದಾರೆ. ಅನುಚರರು ಕಂದಕ ತೋಡುತ್ತಿದ್ದಾರೆ. ಅವರು ಬಿರುಸಿನಿಂದ ಕೆಲಸ ಮಾಡುತ್ತಿದ್ದಾಗ ಮಣ್ಣಿನಡಿ ಪಿಕ್ಕಾಸು ಹೋಗದ ಒಂದು ಗಟ್ಟಿಯಾದ ಸ್ಥಳ ಗೋಚರಿಸಿತು. ಅವರು ತಮ್ಮೆಲ್ಲ ಶಕ್ತಿಯನ್ನು ಬಳಸಿ ಪಿಕ್ಕಾಸು ಹಾಕಿದರೂ ಅದನ್ನು ಒಡೆಯಲಾಗಲಿಲ್ಲ. ಗತ್ಯಂತರವಿಲ್ಲದೆ ಅವರು ಪ್ರವಾದಿಯವರಿಗೆ(ಸ) ವಿಷಯ ತಿಳಿಸಿದರು. ಈ ಸುದ್ದಿ ತಿಳಿದ ಕೂಡಲೇ ಪ್ರವಾದಿವರ್ಯರು(ಸ) ಕಂದಕಕ್ಕೆ ನಾನು ಇಳಿಯುತ್ತೇನೆಂದು ಎದ್ದು ನಿಂತರು. ಹಸಿವು ತಾಳಲಾಗದೆ ಪ್ರವಾದಿಯವರು(ಸ) ತಮ್ಮ ಉದರದ ಮೇಲೆ ಒಂದು ಕಲ್ಲನ್ನು ಬಿಗಿದು ಕೊಂಡಿದ್ದರು. ಅವರೆಲ್ಲರೂ ಆಹಾರ ಸೇವಿಸಿ ಅಂದಿಗೆ ಮೂರು ದಿನ ಕಳೆದಿತ್ತು. ಪ್ರವಾದಿಯವರು(ಸ) ಪಿಕ್ಕಾಸು ಎತ್ತಿ ಆ ಸ್ಥಳಕ್ಕೆ ಹೊಡೆದರು. ಹೊಡೆತ ಬಿದ್ದ ಕೂಡಲೇ ಬಂಡೆ ಒಡೆಯಿತು. ಆ ಪಾವನ ಹಸ್ತದ ಆಜ್ಞೆಗಾಗಿ ಕಾಯುತ್ತಿತ್ತೋ ಎಂಬಂತೆ ಆ ತಳವು ಮರಳಿನ ರಾಶಿಯಾಗಿ ಬಿಟ್ಟಿತು.

ತರುವಾಯ ಜಾಬಿರ್(ರ) ಪ್ರವಾದಿಯವರಿಂದ(ಸ) ಒಪ್ಪಿಗೆ ಪಡೆದು ತಮ್ಮ ಮನೆಗೆ ಹೋದರು. "ನಾನು ಪ್ರವಾದಿವರ್ಯರಲ್ಲಿ(ಸ) ಅಸಹನೀಯವಾದಂಥ ಒಂದು ವಿಷಯವನ್ನು ನೋಡಿದೆ. ಅದನ್ನು ನೋಡಿ ಸಹಿಸಲು ನನ್ನಿಂದ ಸಾಧ್ಯವಿಲ್ಲ. ಇಲ್ಲಿ ಏನಾದರೂ ಆಹಾರ ಪದಾರ್ಥವಿದೆಯೇ?" ಮನೆಗೆ ಹೋದ ಕೂಡಲೇ ಜಾಬಿರ್(ರ) ಪತ್ನಿಯೊಡನೆ ವಿಚಾರಿಸಿದರು. "ಇಲ್ಲಿ ಸ್ವಲ್ಪ ಗೋಧಿ ಮತ್ತು ಒಂದು ಹೆಣ್ಣಾಡಿದೆ." ಆ ಮಹಿಳೆ ವಿನಯದಿಂದ ಉತ್ತರಿಸಿದರು. ಆ ಕೂಡಲೇ ಅವರು ಆಡನ್ನು ಕೊಯ್ದು ಮಾಂಸ ಮಾಡಿ ಸಜ್ಜುಗೊಳಿಸಿ ಪಾತ್ರೆಯಲ್ಲಿ ಹಾಕಿದರು. ಗೋಧಿಯನ್ನು ಹುಡಿಮಾಡಿ ಕಲಸಿದರು.

ಮಾಂಸ ಮತ್ತು ಹಿಟ್ಟು ಪಾಕಕ್ಕೆ ಸಿದ್ಧವಾದಾಗ ಮಧ್ಯಾಹ್ನ ಸಮೀಪಿಸಿತ್ತು. ಜಾಬಿರ್(ರ) ಕೂಡಲೇ ಪ್ರವಾದಿಯವರ(ಸ) ಬಳಿಗೋಡಿದರು. "ಅಲ್ಲಾಹನ ಪ್ರವಾದಿಗಳೇ! ನನ್ನ ಮನೆಯಲ್ಲಿ ಸ್ವಲ್ಪ ಆಹಾರವಿದೆ. ನೀವು ಮತ್ತು ಬೇರೆ ಒಂದಿಬ್ಬರು ಮನೆಗೆ ಬನ್ನಿರಿ"

ಎಂದು ವಿನಂತಿಸಿದರು. "ಆಹಾರ ಎಷ್ಟಿದೆ?" ಪ್ರವಾದಿಯವರು(ಸ) ವಿಚಾರಿಸಿದರು. ಅವರು ಹಿಟ್ಟು ಮತ್ತು ಆಡಿನ ಬಗ್ಗೆ ತಿಳಿಸಿದರು. ಆಗ ಪ್ರವಾದಿಯವರು, "ಓಹೋ, ಅದು ಧಾರಾಳ ವಾಯಿತು. ನಾನು ಬರುವ ತನಕ ಮಾಂಸದ ಪಾತ್ರೆ ಮತ್ತು ರೊಟ್ಟಿಯನ್ನು ಒಲೆಯಿಂದ ಇಳಿಸಬಾರದು. ಈ ವಿಷಯವನ್ನು ಕೂಡಲೇ ಹೋಗಿ ನಿಮ್ಮ ಪತ್ನಿಗೆ ತಿಳಿಸಿರಿ" ಎಂದು ಜಾಬಿರ್‌ರಿಗೆ ಆದೇಶಿಸಿದರು.

"ಎಲ್ಲರೂ ಬನ್ನಿ, ನಾವು ಹೋಗೋಣ", ಪ್ರವಾದಿಯವರು(ಸ) ಅಲ್ಲಿ ನೆರೆದಿದ್ದ ಎಲ್ಲ ಸಹಾಬಿಗಳನ್ನೂ ಜಾಬಿರ್‌ರ(ರ) ಮನೆಗೆ ಕರೆದರು. ಎಲ್ಲರೂ ಪ್ರವಾದಿಯವರ(ಸ) ಜತೆಯಲ್ಲಿ ಜಾಬಿರ್‌ರ ಮನೆಗೆ ಹೊರಟರು. ಹರ್ಷಾತಿರೇಕದಿಂದ ವೇಗವಾಗಿ ಮನೆಗೆ ತಲಪಿದ ಜಾಬಿರ್‌ರು(ರ) ಪತ್ನಿಯೊಡನೆ ಹೀಗೆಂದರು: "ಪ್ರಿಯೆ, ನೀನು ಸಂತುಷ್ಟಳಾಗು, ಇದೋ ಪ್ರವಾದಿ(ಸ), ಅನ್ಸಾರರು ಮತ್ತು ಮುಹಾಜಿರರೆಲ್ಲರೂ ಬರುತ್ತಿದ್ದಾರೆ." "ನಿಮ್ಮೊಡನೆ ಪ್ರವಾದಿಯವರು(ಸ) ಇಲ್ಲಿನ ವಿಷಯ ಕೇಳಿದ್ದರೇ?" ಆ ಮಹಿಳೆ ಸ್ವಲ್ಪ ದಿಗ್ಭ್ರಮೆಯಿಂದ ವಿಚಾರಿಸಿದರು. 'ಹೌದು' ಜಾಬಿರ್ ಉತ್ತರಿಸಿದರು.

ತರುವಾಯ ಸ್ವಲ್ಪ ಸಮಯದಲ್ಲಿಯೇ ಪ್ರವಾದಿ(ಸ) ಮತ್ತು ಸಂಗಾತಿಗಳು ಜಾಬಿರ್‌ರ(ರ) ಮನೆಗೆ ಬಂದರು. "ಎಲ್ಲರೂ ಬಂದು ಕುಳಿತುಕೊಳ್ಳಿರಿ" ಪ್ರವಾದಿಯವರು(ಸ) ಅನುಯಾಯಿ ಗಳಿಗೆ ತಿಳಿಸಿದರು. ಎಲ್ಲರೂ ಮನೆಯೊಳಗೆ ಬಂದರು. ಪ್ರವಾದಿಯವರು(ಸ) ಮನೆಗೆ ಪ್ರವೇಶಿಸಿದ ಕೂಡಲೇ ಅಡುಗೆ ಕೋಣೆಗೆ ಹೋದರು. ಒಲೆಯ ಮೇಲೆ ಮಾಂಸದ ಸಾರು ಮತ್ತು ರೊಟ್ಟಿಯನ್ನು ಮುಚ್ಚಿರಿಸಲಾಗಿತ್ತು. ಪ್ರವಾದಿಯವರು(ಸ) ಅದನ್ನು ತೆಗೆದು ಪಾವನ ಹಸ್ತಗಳಿಂದ ಬಡಿಸಲಾರಂಭಿಸಿದರು. ಅದೋ ಪ್ರವಾದಿಯವರು(ಸ) ರೊಟ್ಟಿ ಮತ್ತು ಮಾಂಸ ಬಡಿಸುತ್ತಿದ್ದಾರೆ. ಹಸಿದು ಬಳಲಿದ ಸಹಾಬಿಗಳಿಗೆ ಪದೇ ಪದೇ ಬಡಿಸುತ್ತಿದ್ದಾರೆ. ಏನದ್ಭುತ! ಅಲ್ಲಿಗೆ ಬಂದ ಸಹಸ್ರ ಮಂದಿಗೆ ಅವರ ಹಸಿವೆ ತಣಿಯುವಷ್ಟು ಬಡಿಸಿದರು. ಆದರೂ ಪಾತ್ರೆಯಲ್ಲಿ ಆಹಾರ ಬಾಕಿ ಉಳಿದಿತ್ತು.

ಉಳಿದ ಆಹಾರವನ್ನು ತೋರಿಸುತ್ತಾ ಪ್ರವಾದಿವರ್ಯರು(ಸ) ಜಾಬಿರ್‌ರ(ರ) ಪತ್ನಿಗೆ ಹೇಳಿದರು: "ಇದೋ, ಇದರಿಂದ ನೀವೂ ತಿನ್ನಿರಿ, ಇತರರಿಗೂ (ಹಸಿದಿರುವ ನೆರೆಯವರಿಗೂ) ಉಣ ಬಡಿಸಿರಿ. ಜನರೆಲ್ಲರೂ ಹಸಿವೆಯಿಂದ ಬಳಲುತ್ತಿದ್ದಾರೆ."

**ಟಿಪ್ಪಣಿಗಳು:**

1. ಪ್ರವಾದಿ(ಸ) ಮತ್ತು ಅನುಯಾಯಿಗಳು ಇಸ್ಲಾಮಿನ ಸಂರಕ್ಷಣೆಗಾಗಿ ಮಾಡಿದ ಕಠಿಣ ತ್ಯಾಗ ಪರಿಶ್ರಮಗಳಿಗೆ ಲೆಕ್ಕ ಮಿತಿಯಿಲ್ಲ. ಆ ದೀರ್ಘ ಯಾದಿಯ ಒಂದು ಸಣ್ಣ ಗೆರೆಯನ್ನು ಮಾತ್ರ ಈ ಕಥೆಯಲ್ಲಿ ನಾವು ಓದಿದ್ದೇವೆ.

ಕಂದಕ ಯುದ್ಧವು ಮುಸ್ಲಿಮ್ ಸಮುದಾಯವನ್ನು ನಡುಗಿಸಿದ ಭಯಂಕರ ಯುದ್ಧವಾಗಿತ್ತು. ಇಸ್ಲಾಮಿನ ವೈರಿಗಳೆಲ್ಲರೂ ಸೇರಿ ಮೈತ್ರಿ ಕೂಟವನ್ನು ರಚಿಸಿದ್ದರು. ಇಸ್ಲಾಮನ್ನು ಭೂಮಿಯಿಂದ ಶಾಶ್ವತವಾಗಿ ಅಳಿಸಿ ಬಿಡಲಿಕ್ಕಾಗಿ ಅವರು ಕೊನೆಯ ನಿರ್ಣಯ ಕೈಗೊಂಡಿದ್ದರು. ಮದೀನಾವನ್ನು ಸುತ್ತುವರಿದು ಮುಸ್ಲಿಮರನ್ನು ನಾಮಾವಶೇಷಗೊಳಿಸ ಬಯಸಿದ್ದರು.

ಶೈಶವಾವಸ್ಥೆಯಲ್ಲಿರುವ ಇಸ್ಲಾಮೀ ರಾಷ್ಟ್ರವನ್ನು ವೈರಿಗಳಿಂದ ರಕ್ಷಿಸಲಿಕ್ಕಾಗಿ ಮುಸ್ಲಿಮರು ಜಾಗರೂಕರಾಗಿದ್ದಾರೆ. ನಗರದ ಒಂದು ಭಾಗದಿಂದ ಮಾತ್ರ ವೈರಿಗಳು ಅನಿರೀಕ್ಷಿತವಾಗಿ ಧಾಳಿ ಮಾಡಬಹುದಾಗಿತ್ತು. ಅದನ್ನು ದುಸ್ತರಗೊಳಿಸಲಿಕ್ಕಾಗಿ ಪ್ರವಾದಿ(ಸ) ಮತ್ತು ಸಂಗಾತಿಗಳು ಆ ದಿಕ್ಕಿನಲ್ಲಿ ಕಂದಕ ತೋಡಲು ನಿರ್ಧರಿಸಿದರು. ಸಲ್ಮಾನ್ ಫಾರ್ಸಿ(ರ) ಅವರು ಈ ಉಪಾಯವನ್ನು ಪ್ರವಾದಿಯವರಿಗೆ(ಸ) ಸೂಚಿಸಿದ್ದರು. ಅಗೆಯ ಬೇಕಾದ ಸ್ಥಳವನ್ನು ಹಂಚಿಕೊಂಡರು. ಪ್ರವಾದಿಯವರು(ಸ) ತಮ್ಮ ಪಾಲಿನ ನೆಲವನ್ನು ತೋಡಿದರು. ದುರ್ಬಲರಾಗಿದ್ದ ಅನುಯಾಯಿಗಳಿಗೆ ನೆರವಾದರು! ಸ್ವಲ್ಪ ಆಲೋಚಿಸಿ ನೋಡಿರಿ, ಪವಿತ್ರ ಇಸ್ಲಾಮಿನ ರಕ್ಷಣೆಗಾಗಿ ಅವರು ಈ ರೀತಿ ಕಠಿಣ ಕೆಲಸ ಮಾಡುತ್ತಿರುವಾಗಲೂ ಅವರು ಮೂರು ದಿನಗಳಿಂದ ಹಸಿದಿದ್ದರೆಂಬುದು ಸತ್ಯವಿಶ್ವಾಸಿಗಳಿಗೆ ರೋಮಾಂಚನಕಾರಿಯಾಗಿದೆ.

2. ತಮ್ಮ ಪ್ರಾಣಕ್ಕಿಂತ ಪ್ರಿಯರಾದ ವಿಶ್ವ ಗುರುವಿನ ಉದರಕ್ಕೆ ಬಿಗಿದ ಕಲ್ಲನ್ನು ನೋಡಿದಾಗ ಜಾಬಿರ್‌ರಿಗಾದ ದುಃಖವನ್ನು ವರ್ಣಿಸಲಾದೀತೇ? ಅವರು ಹೃದಯ ಬೇಗುದಿಯಿಂದ ತಮ್ಮ ಮನೆಗೆ ಮರಳುತ್ತಾರೆ. ಅವರು ತಮ್ಮ ಮನಃಶಾಂತಿಯ ಮಾರ್ಗೋಪಾಯವನ್ನು ಕಂಡು ಹಿಡಿದು ಪ್ರವಾದಿಯವರಿಗೆ(ಸ) ತಿಳಿಸುತ್ತಾರೆ. ಆದರೆ, ಲೋಕಾನುಗ್ರಹಿಯಾದ ಪ್ರವಾದಿಯವರು(ಸ) ಸ್ವಂತದ ಬದಲಾಗಿ ತಮ್ಮ ಅನುಯಾಯಿಗಳ ಹಸಿವಿನ ಬಗ್ಗೆ ಚಿಂತಿತರಾಗಿದ್ದರು. ಇದು ಕರುಣೆ, ಪ್ರೀತಿ ಮತ್ತು ಅನುಕಂಪದ ವಾರಿಧಿ ಯಾಗಿದ್ದ ಪ್ರವಾದಿವರ್ಯರ(ಸ) ಅನೇಕ ಉದಾಹರಣೆಗಳಲ್ಲೊಂದಾಗಿದೆ. ಸತ್ಯವಿಶ್ವಾಸಿ ಗಳಲ್ಲಿ ಮತ್ತು ಅನುಯಾಯಿಗಳು ಹಾಗೂ ನಾಯಕರಲ್ಲಿ ಪರಸ್ಪರ ಇರಬೇಕಾದ ಸೌಹಾರ್ದ ಸಹಾನುಭೂತಿಯ ಗಾಢತೆಯನ್ನು ಈ ಕಥೆ ನಮಗೆ ಕಲಿಸುತ್ತದೆ.

3. ಕೇವಲ ಐದಾರು ಮಂದಿಗೆ ಸಾಕಾಗಬಹುದಾದ ಆಹಾರವು ಸಾವಿರ ಮಂದಿಯ ಹಸಿವು ತಣಿಸಿದ ಬಳಿಕವೂ ಮಿಕ್ಕುಳಿದಿದೆಯೆಂಬುದು ಪ್ರವಾದಿಗಳ ಮೂಲಕ ಅಲ್ಲಾಹನು ಬಹಿರಂಗಪಡಿಸುವ ಪವಾಡವಲ್ಲದೇ ಮತ್ತೇನು?

4. ಪರಸ್ಪರ ತೆಗಳುವ ಮತ್ತು ಸ್ವಸಹೋದರರನ್ನು ತುಚ್ಛೀಕರಿಸುವ ಆಧುನಿಕ ಮುಸ್ಲಿಮರು, ಈ ಚರಿತ್ರೆಯಲ್ಲಿ ಪ್ರತಿಬಿಂಬಿಸುತ್ತಿರುವ ತಮ್ಮ ಪೂರ್ವಜರ ಐಕ್ಯ ಮತ್ತು ಪ್ರೀತಿ-ಅನುಕಂಪವನ್ನು ನೋಡಿ ನಾಚಿ ತಲೆತಗ್ಗಿಸಬೇಕು.

5. ಮುಸ್ಲಿಮನೇ! ಇಸ್ಲಾಮ್ ಆಧುನಿಕ ಯುಗದಲ್ಲಿ ರಕ್ಷಣೆಯಿಲ್ಲದೆ ತೊಳಲಾಡುತ್ತಿರುವುದನ್ನು ನೋಡಿಯೂ ಅದರ ಸಂರಕ್ಷಣೆಗಾಗಿ ಶ್ರಮಿಸದೆ ಕೈಕಟ್ಟಿ ಕುಳಿತುಕೊಳ್ಳುವೆಯಾ? ಕರಿಬಂಡೆಯಂತಹ ನಿನ್ನ ಹೃದಯವನ್ನು ಒಡೆಯಲು 'ಕಂದಕ'ದ ಪಿಕ್ಕಾಸುಗಳಿಗೂ ಸಾಧ್ಯವಿಲ್ಲವೇ? ಮೂರು ದಿನ ಆಹಾರವಿಲ್ಲದೆ ಬೆನ್ನಿಗಂಟಿದ ಹೊಟ್ಟೆಗೆ ಕಲ್ಲುಕಟ್ಟಿ ಪಿಕ್ಕಾಸಿನಿಂದ ನೆಲ ಅಗೆಯುವ ತ್ಯಾಗ ಮೂರ್ತಿ ಪ್ರವಾದಿ ಶಿರೋಮಣಿಯವರನ್ನು ನೀನೊಮ್ಮೆ ನಿನ್ನ ಹೃದಯದಲ್ಲಿ ಸಂಕಲ್ಪಿಸಿ ನೋಡು. ಅವರ ಅನುಯಾಯಿಯೆಂದು ಹೆಮ್ಮೆ ಪಡುವ ನಿನಗೆ ನಿನ್ನ ಬಗ್ಗೆ ಜಿಗುಪ್ಸೆ ತೋರುವುದಿಲ್ಲವೇ?

+++

# ತಾಯಿಯ ವ್ಯಥೆ

ತೊಟ್ಟಿಲ ಪ್ರಾಯದಲ್ಲಿ ಮೂರು ಮಕ್ಕಳು ಮಾತಾಡಿವೆ[1]- 1. ಮರ್ಯಮ್‌ರ ಪುತ್ರ ಈಸಾ(ಅ). 2. ಜುರೈಜನ ಮಾನಹಾನಿಗೆ ಕಾರಣವಾದ ಮಗು. 3. ಇನ್ನೊಂದು ಮಗು.

ಇಸ್ರಾಈಲ್ ಸಮುದಾಯದಲ್ಲಿ ಜುರೈಜ್ ಎಂಬೋರ್ವ ಭಕ್ತರಿದ್ದರು. ಅವರು ಮಠವನ್ನು ಕಟ್ಟಿ ಅದರಲ್ಲಿ ವಾಸವಾಗಿದ್ದರು. ಸನ್ಯಾಸಿ ಜೀವನದಿಂದಲೇ ಪರಲೋಕ ಮೋಕ್ಷವೆಂದು ಅವರು ಭಾವಿಸಿದ್ದರು. ಎಂದಿನಂತೆಯೇ ಒಂದು ದಿನ ಅವರ ತಾಯಿಯು ಅಲ್ಲಿಗೆ ಬಂದರು. 'ಜುರೈಜ್!' ಎಂದು ಗಟ್ಟಿಯಾಗಿ ಕೂಗಿದರು. ಆಗ ಅವರು ನಮಾಝ್‌ನಲ್ಲಿ ಮಗ್ನರಾಗಿದ್ದರು. ಆ ಭಕ್ತರು ಉಭಯ ಸಂಕಟಕ್ಕೆ ಸಿಲುಕಿದರು. "ಅಯ್ಯೋ ನನ್ನ ರಕ್ಷಕನೇ, ತಾಯಿ ಕರೆಯುತ್ತಿದ್ದಾರಲ್ಲವೇ. ಈ ನಮಾಝ್‌ನ ವೇಳೆಯಲ್ಲಿ ನಾನು ಏನು ಮಾಡಲಿ?" ಅವರು ಸ್ವಯಂ ಹೇಳಿಕೊಂಡರು. ಅವರು ನಮಾಝನ್ನು ಮೊಟಕು ಗೊಳಿಸಲಿಲ್ಲ.[2] ಉತ್ತರ ಬಾರದುದರಿಂದ ತಾಯಿಯು ನಿರಾಶೆಯಿಂದ ಮರಳಿದರು.

ಮರುದಿನ ಆ ಮಹಿಳೆಯು ಬಂದಾಗಲೂ ಜುರೈಜ್ ನಮಾಝ್ ನಿರ್ವಹಿಸು ತ್ತಿದ್ದರು. 'ಜುರೈಜ್'ನನ್ನು ಕೂಗಿದರು. ಅವರು ನಮಾಝ್‌ನಿಂದ ವಿಚಲಿತ ರಾಗದೆ ಹಿಂದಿನ ದಿನದಂತೆಯೇ ಆತ್ಮಗತ ಮಾಡಿಕೊಂಡರು. ಅಂದು ಆ ತಾಯಿ ಮನೋವೇದನೆ ಯಿಂದ ಹೊರಟು ಹೋದರು. ಮೂರನೆಯ ದಿನವೂ ಜುರೈಜ್ ನಮಾಝ್‌ನಲ್ಲಿದ್ದಾಗಲೇ ಆಕೆ ಬಂದು ಕರೆದಳು. ಆಕೆಗೆ ಹಿಂದಿನ ದಿನಗಳ ಅನುಭವವೇ ಮರುಕಳಿಸಿತು. ಅವರ ಮನಸ್ಸು ಅತ್ಯಧಿಕ ನೊಂದಿತು. "ಅಲ್ಲಾಹನೇ, ವೇಶ್ಯೆಯರ ಮುಖವನ್ನು ನೋಡದೆ ನೀನು ಈತನನ್ನು ಸಾಯಿಸಬೇಡ!" ಕುಪಿತಳಾದ ಆ ಮಾತೆಯು ಪುತ್ರನಿಗೆ ಹಿಡಿ ಶಾಪ ಹಾಕುತ್ತಾ ಮರಳಿ ಹೋದಳು.

---

1. ಇತರ ಕೆಲವು ಹದೀಸ್‌ಗಳಲ್ಲಿ ಮೂರಕ್ಕಿಂತ ಅಧಿಕವಿದೆಯೆಂದು ತಿಳಿಯುತ್ತದೆ. ಈ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ.

2. ಜುರೈಜ್, ಓರ್ವ ಪಂಡಿತನಾಗಿರುತ್ತಿದ್ದರೆ ತಾಯಿಯ ಕರೆಗೆ ಓಗೊಡುವುದು ಆ ವೇಳೆ ನಮಾಝ್‌ಗಿಂತ ಉತ್ತಮವೆಂದು ಗ್ರಹಿಸುತ್ತಿದ್ದರು- ಎಂಬ ಬೇರೊಂದು ಹದೀಸಿದೆ. ಅವರು ಕಡ್ಡಾಯ ನಮಾಝ್ ನಿರ್ವಹಿಸುತ್ತಿದ್ದುದಲ್ಲ.

ಇಸ್ರಾಈಲರು ಜುರೈಜ್ ಮತ್ತು ಅವರ ಆರಾಧನೆಯನ್ನು ಹೊಗಳಲಾರಂಭಿಸಿದರು. ಅಂದು ಆ ಊರಿನಲ್ಲಿ ಓರ್ವ ಕುಖ್ಯಾತ ಕುಲಟೆಯಿದ್ದಳು. ಜನರು ಆಕೆಯ ಸೌಂದರ್ಯವನ್ನು ಉಪಮೆಯಾಗಿ ಹೇಳುತ್ತಿದ್ದರು. ಜುರೈಜ್‌ರು ಜನರ ಪ್ರಶಂಸೆಗೆ ಪಾತ್ರವಾಗುತ್ತಿರುವುದು ಆಕೆಗೆ ರುಚಿಸಲಿಲ್ಲ. "ಹಾಗೇನೂ ಪ್ರಶಂಸಿಸಬೇಕಾಗಿಲ್ಲ. ನೀವು ಒಪ್ಪಿ ಬಿಟ್ಟರೆ, ನಾನು ಅವರನ್ನು ನನ್ನ ಸೌಂದರ್ಯದ ಅಮಲಿನಲ್ಲಿ ಈಜಾಡಿಸಬಲ್ಲೆ." ಆಕೆ ತನ್ನ ಕಾಮುಕ ಬಳಗಕ್ಕೆ ಸವಾಲು ಹಾಕಿದಳು. ಅವರು ಆ ಸವಾಲನ್ನು ಸ್ವೀಕರಿಸಿ ಆಕೆಯ ಮೋಡಿಯನ್ನು ಪ್ರಯೋಗಿಸುವಂತೆ ಹೇಳಿದರು.

ಆಕೆ ಸಿಂಗರಿಸಿ ಜುರೈಜ್‌ನ ಮಠಕ್ಕೆ ಹೋದಳು. ಅಲ್ಲಿ ಆಕೆ ತನ್ನ ಒಂದೊಂದೇ ತಂತ್ರವನ್ನು ಪ್ರಯೋಗಿಸಲಾರಂಭಿಸಿದಳು. ಆದರೆ ನಿಷ್ಠಾವಂತ ಭಕ್ತರಾದ ಜುರೈಜ್‌ರ ಗಮನವನ್ನು ತನ್ನತ್ತ ಸೆಳೆಯಲು ಆಕೆಗೆ ಕಿಂಚಿತ್ತೂ ಸಾಧ್ಯವಾಗಲಿಲ್ಲ. ತನ್ನ ಪಂಥಾಹ್ವಾನದಲ್ಲಿ ಸೋಲನ್ನು ಮನಗಂಡ ಆ ಕುಲಟೆಯು ಮತ್ತೊಂದು ಕುಟಿಲ ತಂತ್ರ ಪ್ರಯೋಗಿಸಿದಳು. ಅವರ ಮಠದಲ್ಲಿ ಒಬ್ಬ ಕುರುಬ ಉಳಕೊಳ್ಳುತ್ತಿದ್ದ. ಆಕೆಯು ಆತನನ್ನು ಬುಟ್ಟಿಗೆ ಹಾಕಿದಳು. ಅನಿರೀಕ್ಷಿತವಾಗಿ ದೊರೆತ ಆ ಸದವಕಾಶವನ್ನು ಬಳಸಿ ಆಕೆಯು ತನ್ನ ಕಾಮಾಸಕ್ತಿಯನ್ನು ಈಡೇರಿಸಿದಳು.

ಕುರುಬನೊಂದಿಗಿನ ಅನೈತಿಕ ಸಂಬಂಧದಿಂದ ಆಕೆ ಗರ್ಭವತಿಯಾದಳು. ಯಥಾ ವೇಳೆ ಆಕೆಗೊಂದು ಗಂಡು ಮಗು ಹುಟ್ಟಿತು. ಆಕೆ ಆ ಹಸುಳೆಯನ್ನು ಜನರಿಗೆ ತೋರಿಸಿ ಜುರೈಜ್, ಈ ಮಗುವಿನ ತಂದೆ ಎಂದು ಪ್ರಚಾರ ಮಾಡಿದಳು. ಈ ಸುದ್ದಿ ಕೇಳಿದ ತಕ್ಷಣ ಜನರ ಗುಂಪು ಮಠದತ್ತ ಧಾವಿಸಿತು. "ಲೋ, ಬಾರೋ ಹೊರಗೆ?" ನೆರೆದಿದ್ದ ಜನ ಜಂಗುಳಿ ಆಕ್ರೋಶದಿಂದ ಅಬ್ಬರಿಸಿತು. ನಿಮಿಷಗಳೊಳಗೆ ಮಠವನ್ನು ಅವರು ನಿರ್ನಾಮ ಗೊಳಿಸಿದರು. ಅವರನ್ನು ಹೊರಗೆಳೆದು ಥಳಿಸಲಾರಂಭಿಸಿದರು. "ನಿಮ್ಮ ಈ ಕೃತ್ಯಗಳಿಗೆ ಕಾರಣವೇನು? ಅವರು ಜನರೊಡನೆ ವಿನಯದಿಂದ ವಿಚಾರಿಸಿದರು." ಕಾರಣ ತಿಳಿಸಬೇಕೇ? ನಿನ್ನ ಭಕ್ತಿಯ ಹಿಂದೆ ಭೋಗಾಸಕ್ತಿಯಿದೆಯೆಂದು ನಮಗೆ ಸ್ಪಷ್ಟವಾಗಿದೆ. ನೀನು ಈ ವೇಶ್ಯೆಯೊಡನೆ ವ್ಯಭಿಚಾರ ನಡೆಸಲಿಲ್ಲವೇ. ಆಕೆ ನಿನಗಾಗಿ ಒಂದು ಮಗುವನ್ನು ಹೆತ್ತಿದ್ದಾಳೆ. ಇದಕ್ಕಿಂತ ದೊಡ್ಡ ಕಾರಣ ಬೇರೆ ಬೇಕೇ?" ಅವರು ಉತ್ತರಿಸಿದರು. 'ಮಗು ಎಲ್ಲಿದೆ?' ಅವರು ಅಚ್ಚರಿಯಿಂದ ಪುನಃ ಪ್ರಶ್ನಿಸಿದರು. ಆ ಕೂಡಲೇ ಮಗುವನ್ನು ತಂದು ಅವರಿಗೆ ತೋರಿಸಿದರು.

ಮಗುವನ್ನು ನೋಡಿದ ಕೂಡಲೇ ಅವರು, "ನನಗೆ ನಮಾಝ್‌ಗಾಗಿ ಸ್ವಲ್ಪ ಅವಕಾಶ ನೀಡಿರಿ. ಆ ಬಳಿಕ ನಾನು ನನ್ನ ನಿರಪರಾಧಿತ್ವವನ್ನು ಸಾಬೀತುಪಡಿಸುತ್ತೇನೆ" ಎಂದು ವಿನಂತಿಸಿದರು. ಜನರು ಒಪ್ಪಿದರು. ಅವರು ನಮಾಝ್‌ನಲ್ಲಿ ಮಗ್ನರಾದರು. ಈ ಹಗರಣದಲ್ಲಿ ತನಗೆ ನೆರವಾಗುವಂತೆ ಅಲ್ಲಾಹನೊಡನೆ ಮನಕರಗಿ ಪ್ರಾರ್ಥಿಸಿದರು.

ತರುವಾಯ ಆ ಮಗುವಿನ ಬಳಿಗೆ ಹೋಗಿ ಅದರ ಉದರವನ್ನು ಬೆರಳಿನಿಂದ ಒತ್ತಿ, "ಹೇ ಮಗುವೇ, ನಿನ್ನ ತಂದೆ ಯಾರು?" ಎಂದು ಪ್ರಶ್ನಿಸಿದರು. ಆಗ ಆ ಮಗು ಸ್ಪಷ್ಟ ಮಾತುಗಳಿಂದ ತನ್ನ ತಂದೆಯ ಹೆಸರನ್ನು ಬಹಿರಂಗಪಡಿಸಿತು.

ಒಂದು ಹಸುಳೆಯು ತನ್ನ ತಂದೆಯ ಹೆಸರನ್ನು ಸ್ಪಷ್ಟವಾಗಿ ಹೇಳುವುದನ್ನು ಕೇಳಿ ಅಲ್ಲಿ ನೆರೆದಿದ್ದವರಿಗೆ ಅಚ್ಚರಿಯಾಯಿತು. ಜುರೈಜ್ ನಿರಪರಾಧಿಯೆಂದು ಅವರಿಗೆ ಮನವರಿಕೆಯಾಯಿತು. ಅವರು ಸಂತೋಷದಿಂದ ಆ ಮಹಾತ್ಮನನ್ನು ಆಲಿಂಗಿಸಿದರು. ಓರ್ವ ವೇಶ್ಯೆಯ ಕುತಂತ್ರದಿಂದ ತಾವು ಮಾಡಿದ ಅಪರಾಧಕ್ಕಾಗಿ ಕ್ಷಮೆ ಕೋರಿದರು. "ನಾವು ಧ್ವಂಸ ಗೊಳಿಸಿದ ನಿಮ್ಮ ಆರಾಧನಾಲಯವನ್ನು ಚಿನ್ನದಿಂದ ನಿರ್ಮಿಸಿ ಕೊಡುತ್ತೇವೆಂದು ಅವರು ಹೇಳಿದರು." ಬೇಡ, ಅದನ್ನು ಮೊದಲಿದ್ದಂತೆಯೇ ಮಣ್ಣಿನಿಂದ ಕಟ್ಟಿಕೊಟ್ಟರೆ ಸಾಕು" ಎಂದು ಅವರು ತಿಳಿಸಿದರು. ಆ ಪ್ರಕಾರ ಅವರು ಮಠವನ್ನು ಪುನರ್ನಿರ್ಮಿಸಿದರು.

* * *

ತಾಯಿಯ ಮೊಲೆ ಹಾಲು ಚೀಪುತ್ತಿರುವ ಒಂದು ಮಗು. ಒಂದು ಕುತೂಹಲಕಾರೀ ಪ್ರಾಣಿಯ ಮೇಲೆ ಕುಳಿತು ಓರ್ವ ವ್ಯಕ್ತಿಯು ಸಂಚರಿಸುತ್ತಿದ್ದಾರೆ. ಅದನ್ನು ತಾಯಿ ನೋಡಿದಳು. "ಅಲ್ಲಾಹನೇ, ನನ್ನ ಮಗುವನ್ನು ಆ ಮಹನೀಯರಂತೆ ಮಾಡು." ಪುತ್ರ ವಾತ್ಸಲ್ಯದಿಂದ ಆಕೆ ಪ್ರಾರ್ಥಿಸಿದಳು. ಆಗ ಆ ಮಗುವು ಮೊಲೆ ಚೀಪುವುದನ್ನು ನಿಲ್ಲಿಸಿ ಆ ವ್ಯಕ್ತಿಯತ್ತ ನೋಡಿ ಹೀಗೆ ಪ್ರಾರ್ಥಿಸಿತು, "ಅಲ್ಲಾಹನೇ, ನನ್ನನ್ನು ನೀನು ಅವರಂತೆ ಮಾಡಬೇಡ." ತರುವಾಯ ಮಗು ಮೊಲೆ ಚೀಪಲಾರಂಭಿಸಿತು.

ಆ ಹಾಲುಗಲ್ಲದ ಮಗುವನ್ನು ಎತ್ತಿಕೊಂಡು ಆಕೆ ಎಲ್ಲಿಗೋ ಹೊರಟಿದ್ದಳು. ದಾರಿಯಲ್ಲಿ ಹಲವರು ಸೇರಿ ಓರ್ವ ಗುಲಾಮ ಮಹಿಳೆಯನ್ನು ಥಳಿಸುತ್ತಿರುವುದನ್ನು ಆಕೆ ನೋಡಿದಳು. "ನೀನು ವ್ಯಭಿಚರಿಸಿಲ್ಲವೇ ಕದಿಯಲಿಲ್ಲವೇ?" ಎಂದು ಆಕೆಯನ್ನು ಜರೆಯುತ್ತಿದ್ದರು. "ನನ್ನ ಎಲ್ಲ ವಿಷಯವನ್ನು ಅಲ್ಲಾಹನಿಗೆ ಬಿಟ್ಟಿದ್ದೇನೆ. ಭರವಸೆ ಯಿರಿಸಲು ಆತನೇ ಅತ್ಯಂತ ಯೋಗ್ಯನು" ಎಂದು ಆ ಮಹಿಳೆ ಉತ್ತರಿಸುತ್ತಿದ್ದಳು. ಗುಲಾಮ ಮಹಿಳೆಯನ್ನು ದಂಡಿಸುವುದನ್ನು ನೋಡಿ ಆ ತಾಯಿಯು, "ಅಲ್ಲಾಹನೇ, ನನ್ನ ಮಗುವನ್ನು ಆಕೆಯಂತೆ ಮಾಡಬೇಡ" ಎಂದು ಪ್ರಾರ್ಥಿಸಿದಳು. ಮೊಲೆ ಚೀಪುತ್ತಿದ್ದ ಆ ಮಗು ತುಟಿಯನ್ನು ಸರಿಸಿ ಗುಲಾಮ ಮಹಿಳೆಯನ್ನು ಒಮ್ಮೆ ನೋಡಿತು. ತರುವಾಯ ಹೀಗೆ ಪ್ರಾರ್ಥಿಸಿತು: "ಅಲ್ಲಾಹನೇ! ನೀನು ನನ್ನನ್ನು ಆಕೆಯಂತೆ ಮಾಡು."

ಈ ಘಟನೆಯ ಬಳಿಕ ಆ ಮಗು ಮತ್ತು ತಾಯಿ ಪರಸ್ಪರ ಸಂಭಾಷಣೆ ನಡೆಸಿದರು:

ತಾಯಿ: "ಎರಡು ಬಾರಿ ನಿನಗಾಗಿ ಪ್ರಾರ್ಥಿಸಿದಾಗಲೂ ನೀನು ವಿರುದ್ಧವಾಗಿ ಪ್ರಾರ್ಥಿಸಲು ಕಾರಣವೇನು?"

ಮಗು: "ನಾವು ಮೊದಲು ನೋಡಿದ ವ್ಯಕ್ತಿಯು ಓರ್ವ ದುರಹಂಕಾರಿ. ಆದ್ದರಿಂದಲೇ ನಾನು, ಅಲ್ಲಾಹನೇ, ನನ್ನನ್ನು ನೀನು ಅವರಂತೆ ಮಾಡಬೇಡ ಎಂದು ಹೇಳಿದೆ. ಈ ಗುಲಾಮ ಮಹಿಳೆಯ ಕುರಿತು ಇವರು ವ್ಯಭಿಚಾರ ಮತ್ತು ಕಳ್ಳತನ ನಡೆಸಿರುವಳೆಂದು ಹೇಳುತ್ತಿದ್ದಾರೆ. ವಾಸ್ತವದಲ್ಲಿ ಆಕೆ ಅಂತಹ ಯಾವ ಅಪರಾಧವನ್ನೂ ಮಾಡಿಲ್ಲ. ಆದ್ದರಿಂದ, 'ಅಲ್ಲಾಹನೇ, ನೀನು ನನ್ನನ್ನು ಈಕೆಯಂತೆ ಮಾಡು" ಎಂದು ಪ್ರಾರ್ಥಿಸಿದೆ.

**ಟಿಪ್ಪಣಿಗಳು:**

1. ಜುರೈಜ್‌ನ ಈ ಕಥೆಯು ತಾಯಿಯೊಂದಿಗಿನ ಅಭೇದ್ಯ ಋಣದ ಘನ ಸ್ವರೂಪವನ್ನು ರುಜುಪಡಿಸುತ್ತದೆ. ವಸ್ತುತಃ ಜುರೈಜ್, ಆತ್ಮಸಾಕ್ಷಿಗೆ ವಿರುದ್ಧವಾಗಿ ಯಾವ ತಪ್ಪನ್ನೂ ಮಾಡಿಲ್ಲ. ಹಾಗಿದ್ದರೂ ಮನೋವ್ಯಥೆಯಿಂದ ತಾಯಿಯು ಮಗನ ವಿರುದ್ಧ ಮಾಡಿದ ಪ್ರಾರ್ಥನೆಯನ್ನು ತಿರಸ್ಕರಿಸಲಿಲ್ಲ. ತಂದೆತಾಯಂದಿರು ಮಕ್ಕಳನ್ನು ಮನನೊಂದು ಶಪಿಸಿದರೆ ಅದು ಗುರಿಗೆ ನಾಟುವುದೆಂದರ್ಥ.

ಮಾನವನು ಪ್ರೀತ್ಯಾದರಗಳಿಂದ ವರ್ತಿಸುವ ಕುರಿತು ತಂದೆಗಿಂತ ತಾಯಿಗೆ ಇಸ್ಲಾಮ್ ಆದ್ಯತೆ ನೀಡಿದೆ. ಪ್ರತಿಯೊಬ್ಬ ವ್ಯಕ್ತಿಯ ಬೀಜಾಂಕುರದಿಂದ ಆತನಿಗಾಗಿ ತಾಯಿಯು ಬಹುವಂಶ ಯಾತನೆಗಳನ್ನು ಅನುಭವಿಸುತ್ತಾಳೆ.

ತಂದೆತಾಯಂದಿರ ಗೌರವಾಭಿಮಾನಗಳಿಗೆ ಧಕ್ಕೆ ಒದಗಿಸುವ ಯಾವ ಕೃತ್ಯವನ್ನೂ ಮಾನವನು ಮಾಡಬಾರದೆಂದು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ವಚನಗಳಲ್ಲಿ ಕಟ್ಟೆಚ್ಚರಿಕೆ ನೀಡಲಾಗಿದೆ. ಅದನ್ನು ನಿರ್ಲಕ್ಷಿಸಿ ತಂದೆ ತಾಯಂದಿರನ್ನು ಪೀಡಿಸುವ ಕುಲದ್ರೋಹಿಗಳ ನೀಚವೃತ್ತಿಯು ಖಂಡನೀಯವಾಗಿದೆ! ಧರ್ಮ, ಮಾನವೀಯತೆ ಮತ್ತು ಸಭ್ಯತೆಯನ್ನು ತೊರೆದ ಪಶು ಸಮಾನರು ಮಾತ್ರ ಹಾಗೆ ಮಾಡಬಲ್ಲರು. ಅದರ ಕಹಿಫಲಗಳ ನೆರಳನ್ನು ಕೆಲವರು ಇಹಲೋಕದಲ್ಲಿಯೇ ಅನುಭವಿಸುವುದು ಹಲವೊಮ್ಮೆ ಕಂಡು ಬಂದಿದೆ. ಪರಲೋಕದಲ್ಲಿ ನರಕಾಗ್ನಿಯು ಅವರ ಸ್ವಾಗತಕ್ಕಾಗಿ ಕಾಯುತ್ತಿದೆ.

2. ನಿಷ್ಕಳಂಕ ದೇವ ಭಕ್ತರಿಗೆ ಕಳಂಕ ಹಚ್ಚಲು ಕೆಲವು ದುರ್ಬುದ್ಧಿಗಳು ಪ್ರಯತ್ನಿಸಬಹುದು. ಅವರ ಆ ಪ್ರಯತ್ನಗಳಿಂದ ಕೆಲವೊಂದು ಪರಿಣಾಮಗಳುಂಟಾಗ ಬಹುದಾದರೂ ಅವು ಕ್ಷಣಿಕವಾಗಿರುತ್ತವೆ. ಜುರೈಜ್‌ನ ಘಟನೆ ಅದನ್ನು ಸ್ಪಷ್ಟಪಡಿಸಿದೆ. ಅವರ ಮಾನಹಾನಿಗೆ ತಾಯಿಯ ಪ್ರಾರ್ಥನೆಯು ಮೂಲ ಕಾರಣವಾಗಿದ್ದರೂ ಅದೊಂದು ಪರೋಕ್ಷ ಕಾರಣವಾಗಿತ್ತು. ಆ ಕುಲಟೆಯ ಕುಪ್ರಚಾರವು ಪ್ರತ್ಯಕ್ಷ ಕಾರಣವಾಗಿತ್ತು. ಆದರೆ, ಆಕೆಗೆ ಆ ಮಹಾತ್ಮನನ್ನು ಕೇವಲ ಕ್ಷಣಿಕವಾಗಿ ಅಪಮಾನಿಸಲು ಸಾಧ್ಯವಾಯಿತು. ಆ ಮೂಲಕ

ಅಲ್ಲಾಹನು ಅವರ ಸ್ಥಾನ ಮಾನವನ್ನು ಕುಂದಿಸದೆ ಉನ್ನತ ಗೊಳಿಸಿದನು. ಸತ್ಯವು ಬಹಿರಂಗಗೊಂಡ ಬಳಿಕ ಅವರ ಕುರಿತು ಜನಮನದಲ್ಲಿ ಗೌರವ ಭಾವನೆ ದ್ವಿಗುಣ ಗೊಂಡುದನ್ನು ನಾವು ನೋಡಿದೆವು. ತಾಯಿಯ ಮನೋವ್ಯಥೆಯಿಂದಾಗಿ ಅವರ ಹೃದಯವೂ ಬಹಳಷ್ಟು ನೊಂದಿತು. ತರುವಾಯ ಅಲ್ಲಾಹನು ಅವರನ್ನು ಸುರಕ್ಷಿತಗೊಳಿಸಿದನು.

ಉನ್ನತ ಧರ್ಮ ನಿಷ್ಠರೂ ತಮ್ಮಂತೆಯೇ ದುಷ್ಕೃತ್ಯಗಳನ್ನು ಮಾಡುವರೆಂಬ ಭಾವನೆ ಮೂಡಿಸಲು ಕೆಲವು ನೀಚರು ಪ್ರಯತ್ನಿಸುತ್ತಾರೆ. ತಮ್ಮ ದುರ್ವರ್ತನೆಗಳನ್ನು ಸಾಮಾನ್ಯ ಗೊಳಿಸಲಿಕ್ಕಾಗಿ ಅವರು ಆ ತಂತ್ರವನ್ನು ಬಳಸುತ್ತಾರೆ. ತಮ್ಮ ಕುಪ್ರಚಾರಕ್ಕೆ ಆಹಾರ ವಾಗುವ ಯಾವುದಾದರೂ ಸುಳಿವು ದೊರೆಯುವುದೋ ಎಂದು ಅವರು ದುರ್ಬೀನು ಹಿಡಿದು ನೋಡುತ್ತಾರೆ. ತಮಗೆ ಅನುಕೂಲವಾದ ಒಂದು ಸಣ್ಣ ಸುದ್ದಿ ದೊರೆತರೂ ಅದಕ್ಕೆ ಒಗ್ಗರಣೆ ಹಾಕಿ ವೈಭವೀಕರಿಸುತ್ತಾರೆ. ಇದು ಇಂದಿನಂತೆಯೇ ಹಿಂದಿನ ಕಾಲದಲ್ಲಿಯೂ ದುರ್ಮಾರ್ಗಿಗಳ ಕುಲ ಕಸುಬಾಗಿತ್ತು. ಅದು ಅವರ ಆತ್ಮ ಸಂತೃಪ್ತಿಯ ಉಪಾಧಿಯಾಗಿತ್ತು.

ಕೆಲವರು ಅದಕ್ಕಿಂತ ಸ್ವಲ್ಪ ಮುಂದುವರಿದು ಸಜ್ಜನರಿಂದ ಕೆಟ್ಟ ಕೆಲಸಗಳನ್ನು ಮಾಡಿಸಲು ಗರಿಷ್ಠ ಪ್ರಯತ್ನಿಸುತ್ತಾರೆ. ಅದರಲ್ಲಿ ವಿಫಲಗೊಂಡರೆ ಹಸಿ ಸುಳ್ಳು ಹೇಳಿ ಆ ಸಾತ್ವಿಕರಿಗೆ ಮಸಿ ಬಳಿಯಲು ಶ್ರಮಿಸುತ್ತಾರೆ. ಈ ಕಥೆಯ ಕುಲಟೆಯು ಆ ತಂತ್ರ ಪ್ರಯೋಗಿಸಿದ್ದಳು. ಅವಳ ಲೈಂಗಿಕ ಮಾರುಕಟ್ಟೆಯ ಗಿರಾಕಿಗಳು ಅದಕ್ಕೆ ಬೆಂಬಲ ನೀಡಿದರು. ಆದರೆ, ಸತ್ಯವನ್ನು ಬಹಿರಂಗಪಡಿಸಿ ಅಲ್ಲಾಹನು ಆಕೆಯ ಪ್ರಯತ್ನವನ್ನು ನಿಷ್ಫಲಗೊಳಿಸಿದನು.

3. ಬಾಹ್ಯ ಗುಣನಡತೆಗಳನ್ನು ನೋಡಿ ವ್ಯಕ್ತಿಗಳನ್ನು ಉತ್ಕೃಷ್ಟರೆಂದು ಪರಿಗಣಿಸುವ ಪರಿಪಾಠ ಹಿಂದಿನ ಕಾಲದಲ್ಲಿಯೇ ಇತ್ತು. ಕಾರೂನ್‌ನ ಲೌಕಿಕ ಸಂಪತ್ಸಮೃದ್ಧಿಯನ್ನು ಕಂಡು ಆ ಊರಿನ ಜನರು ನಾವು ಕೂಡಾ ಆತನಂತೆಯೇ ಆಗಬೇಕೆಂದು ಹಂಬಲಿಸಿದ್ದರು! ಈ ದೃಷ್ಟಿಕೋನವನ್ನು ಇಸ್ಲಾಮ್ ಸರ್ವಥಾ ಅಂಗೀಕರಿಸುವುದಿಲ್ಲ. ಅದು ಮಾನವನ ಭಯಭಕ್ತಿ ಜೀವನಕ್ಕೆ ಆದ್ಯತೆ ನೀಡುತ್ತದೆ. ಈ ವಾಸ್ತವಿಕತೆಯನ್ನು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ವಚನಗಳು ಅನೇಕ ಕಡೆ ಸ್ಪಷ್ಟ ಪಡಿಸಿದೆ. ಓರ್ವ ಕರಿ ಮಹಿಳೆಯು ಮದೀನದ ಮಸೀದಿಯನ್ನು ಗುಡಿಸಿ ಶುಚಿಗೊಳಿಸುತ್ತಿದ್ದಳು. ಕೆಲವು ದಿನ ಆಕೆ ಬರಲಿಲ್ಲ. ಆಗ ಪ್ರವಾದಿಯವರು(ಸ) ಆಕೆಯ ಕುರಿತು ವಿಚಾರಿಸಿದರು. ಆಗ ಅನುಯಾಯಿಗಳು ಆಕೆ ಮರಣ ಹೊಂದಿರುವಳೆಂದು ತಿಳಿಸಿದರು. ಅದು ಪ್ರವಾದಿಯವರಿಗೆ(ಸ) ತಿಳಿಸಬೇಕಾ ದಂತಹ ವಿಶೇಷ ಸುದ್ದಿಯೆಂದು ಅವರು ಪರಿಗಣಿಸಿರಲಿಲ್ಲ. ಆದರೆ ಪ್ರವಾದಿಯವರು(ಸ) ಆ ಕುರಿತು ಅನುಯಾಯಿಗಳನ್ನು ಪ್ರಶ್ನಿಸಿ ತಮ್ಮ ಅಸಂತೋಷ ವ್ಯಕ್ತಪಡಿಸಿದರು. ಪ್ರವಾದಿಯವರು(ಸ) ಆ ಮಹಿಳೆಯ ಸಮಾಧಿಯ

ಬಳಿ ಹೋಗಿ ಜನಾಝ ನಮಾಝ್ ನಿರ್ವಹಿಸಿದರು. ಲೌಕಿಕ ದೃಷ್ಟಿಯಲ್ಲಿ ತುಚ್ಛರೆಂದು ಪರಿಗಣಿಸುವವರ ಶ್ರೇಷ್ಠತೆಯನ್ನು ಎತ್ತಿ ಹೇಳಿದ ಅನೇಕ ಪ್ರವಾದಿ ವಚನಗಳಿವೆ.

ಈ ಕಥೆಯ ಕೊನೆಯ ಭಾಗವು ಅದನ್ನು ವಿಧಿತ ಪಡಿಸಿದೆ. ಲೌಕಿಕ ಲಾಭ ನಷ್ಟ ಗಳನ್ನು ನೋಡಿ ಆತನಂತೆ ಮಾಡು! ಆಕೆಯಂತೆ ಮಾಡಬೇಡ! ಎಂದು ಮುಂತಾಗಿ ಪ್ರಾರ್ಥಿಸಬಾರದು. ಆ ನಿಟ್ಟಿನಲ್ಲಿ ಕೇವಲ ನಿಷ್ಕಳಂಕ ಭಕ್ತಿ ಮಾತ್ರ ಗಮನಾರ್ಹವೆಂದು ಕಥೆಯ ಆ ಭಾಗವು ಸ್ಪಷ್ಟಪಡಿಸುತ್ತದೆ.

+++